# ಸಪ್ತಪದಿ

ಎಂಬ

# ವಿವಾಹ ಮಂಗಲ

ಸಂಪಾದಕ:

ಜಿ. ಪಿ. ರಾಜರತ್ನಂ

ಬಿ. ಬಿ. ಡಿ. ಪವರ್ ಪ್ರೆಸ್

ಬೆಂಗಳೂರು - ೨

ಮೊದಲನೆಯ ಮುದ್ರಣ :
೨೬—೪—೧೯೫೧

ಬೆಲೆ : ಎರಡು ರೂಪಾಯಿ

ಈ ಪುಸ್ತಕದ ಪುಟ ೯ರಿಂದ ೬೪
ಬೆಂಗಳೂರಿನ ಶ್ರೀ ಬಿ. ಎಸ್. ಐಯಂಗಾರ್ ಅವರಿಂದಲೂ
ಇನ್ನು ಉಳಿದುದು ಅಷ್ಟೂ
ಬಿ. ಬಿ. ಡಿ. ಪವರ್ ಪ್ರೆಸ್ಸಿನ ಶ್ರೀ ಯು. ನರಸಿಂಹ ಮಲ್ಯ ಅವರಿಂದಲೂ
ಅಚ್ಚಾಯಿತು.

ಸನ್ಮಿತ್ರರಾದ

ಶ್ರೀ ಕೆ. ವಿ. ಐಯರ್

ಅವರ ಮಕ್ಕಳಿಗೆ

ವಿಶ್ವಾಸಪೂರ್ವಕವಾಗಿ

ಸಕಲ ಮಂಗಲಗಳನ್ನು ಕೋರಿ

ಕೊಟ್ಟದ್ದು

# ವಿವಾಹಮಂಗಲ

ಪ್ರಿಯತರಲವಂಗಲವಲೀ-
ದ್ವಯಮೊಕ್ಕಮೊಕ್ಕೈಕಲಲಿತಶಾಖಾಯೋಗಂ
ನಯದಿಂ ಸಮನಿಪವೋಲಾ-
ಪ್ರಿಯಂಗವಾ ಪ್ರಿಯೆಗವಾಯ್ತು ಪಾಣಿಗ್ರಹಣಂ

ಕೆಂದಳಿರೇರಿದ ಮಾವಂ
ಬಂದ ವಸಂತದೊಳನಂಗನಂಗನೆ ಸಹಿತೆ-
ಳ್ತಂದು ಬಲವಂದು ಮನ್ನಿಸು-
ವಂದದೆ ಬಲಗೊಂಡರಗ್ನಿಯಂ ದಂಪತಿಗಳ್

ಕಡುಮೋಳವುಳ್ಳವರ್ ಕಾ-
ಲ್ವಿಡಿವಿಡಿಯೆನೆ ಕುವರನೋಪಳೆಸೆವ್ವುಂಗುಟಮಂ
ಪಿಡಿದು ನಸುನಗುತಮಾಕೆಯ
ಕಡುರಾಗದೆ ಸಪ್ತಪದಿಗಳಂ ಮೆಟ್ಟಿಸಿದಂ

ನಿಟ್ಟೆಯ್ದೆಯಾಗು ಪತಿಯೊಳ್
ತೊಟ್ಟನುವಶೆಯಾಗು ಶೀಲವತಿಯಾಗು ಚಿರಂ
ನಿಟ್ಟಾಯುವಾಗು ನೀನೆಂ-
ದಿಟ್ಟರ್ ಸೇಸೆಯನಗಣ್ಯಪುಣ್ಯಾಂಗನೆಯರ್

(ಅನುವಾದಕ್ಕೆ ಪುಟ ೧೧೭, ೧೧೮ ನೋಡಿ.)

# ಅರಿಕೆ

## ೧

ಮೊನ್ನೆ ನಮ್ಮ ಸ್ನೇಹಿತರ ಮನೆಯಲ್ಲಿ ಮದುವೆಯಾಯಿತು. ಆ ಮದುಮಕ್ಕಳಿಗೆ ಮಂಗಲಗಳನ್ನು ಭಾವಿಸಿಕೊಡಬೇಕೆಂದು ಈ **ಸಪ್ತಪದಿ** ಸಿದ್ಧವಾಯಿತು.

ಮದುವೆಯ ಕಾಲಗಳಲ್ಲಿ ಮದುಮಕ್ಕಳು ಲಕ್ಷ್ಮೀನಾರಾಯಣರಂತೆ, ಇಂದ್ರ ಇಂದ್ರಾಣಿಯರಂತೆ, ಪಾರ್ವತೀ ಪರಮೇಶ್ವರರಂತೆ, ವಸಿಷ್ಠ ಅರುಂಧತಿಯರಂತೆ, ರತಿ ಮನ್ಮಥರಂತೆ, ಇನ್ನೂ ಈ ತೆರನಾಗಿ ಅನ್ಯೋನ್ಯ ವಾದ ಧ್ರುವದಂಪತಿಗಳಂತೆ ಬದುಕಿ ಬಾಳಲಿ ಎಂದು ಹರಸುವುದೂ ಹಾರೈಸುವುದೂ ನಮ್ಮ ಪದ್ಧತಿ. ಅದೇ ಪದ್ಧತಿಗೆ ಸೇರಿದ್ದು ಈ **ಸಪ್ತಪದಿ.**

ಈ ಉದ್ದೇಶದಿಂದ ಸಿದ್ಧವಾದ ಈ ಸಪ್ತಪದಿಯಲ್ಲಿ ಲೋಕೋತ್ತರ ವೆನ್ನಿಸಿ ಪ್ರಸಿದ್ಧವಾಗಿರುವ ಏಳು ವಿವಾಹ ಮಹೋತ್ಸವಗಳ ಚಿತ್ರವಿದೆ. ವಿಷ್ಣುವಿನಲ್ಲಿ ವಿಶ್ವಾಸವುಳ್ಳವರು, ಶಿವನಲ್ಲಿ ಶ್ರದ್ಧೆಯುಳ್ಳವರು, ಜಿನನಿಗೆ ಶರಣಾದವರು—ಎಲ್ಲರಿಗೂ ರುಚಿಯಾಗುವಂತೆ ಇಲ್ಲಿನ ವರ್ಣನೆಗಳ ಪೋಣಿಕೆಯಾಗಿದೆ.

ಹೀಗೆ ಏಳು ಹೆಜ್ಜೆಗಳಲ್ಲಿ ಚಿತ್ರಗೊಂಡಿರುವ ಈ ವಿವಾಹಮಹೋತ್ಸವ ಗಳ ಸಪ್ತಪದಿಗೆ ಆರಂಭದಲ್ಲಿ ಒಂದು ನಾಂದೀಮಂಗಲವೂ ಮುಕ್ತಾಯ ದಲ್ಲಿ ಒಂದು ಸೋಬಾನೆಯೂ ಹೊಂದಿ, ಚಿತ್ರಕ್ಕೆ ಸಂಬದ್ಧವಾದ ಚೌಕಟ್ಟಾಗಿದೆ.

ಈ ನಾಂದೀಮಂಗಲ, ಏಳು ವಿವಾಹ ವರ್ಣನೆಗಳು, ಸೋಬಾನೆ— ಇವೇ ಈ 'ಸಪ್ತಪದಿ'ಯ ಮಾತೃಕೆ. (ಪುಟ ೯ ರಿಂದ ೩೨)

ಅನಂತರ, ಪರಿಶಿಷ್ಟ: ಹೆಣ್ಣನ್ನು ಕುರಿತು, ಗಂಡನ್ನು ಕುರಿತು, ಅವರ ಕುಲವನ್ನು ಕುರಿತು, ಅವರ ಅಲಂಕಾರವನ್ನು ಕುರಿತು, ಅವರ ಮದು ವೆಯ ಮನೆಯನ್ನು ಕುರಿತು, ಅಲ್ಲಿನ ಸಜ್ಜನ್ನು ಕುರಿತು, ಅವರ ಮದು ವೆಯ ಹೆಜ್ಜೆಗಳನ್ನು ಕುರಿತು, ಮದುವೆ ಮುಗಿದ ಮೇಲೆ ಹೆಣ್ಣನ್ನು ಗಂಡಿಗೆ ಒಪ್ಪಿಸುವುದನ್ನು ಕುರಿತು. (ಪುಟ ೩೩ ರಿಂದ ೬೪.)

ಇದುವರೆಗೆ ನಿರೂಪಮಾಡಿದುದೆಲ್ಲಾ ಪದ್ಯರೂಪದಲ್ಲಿದೆ, ಇದರ ಭಾಷೆಯೆಲ್ಲಾ ಹಳೆಯ ಕಾಲದ್ದು. ಓದಿದವರಿಗೆ ಇದರೊಳಗಿನ ಭಾವನೆಗಳೆಲ್ಲಾ ವೇದಮಂತ್ರಗಳ ಭಾವನೆಗಳಂತೆಯೇ ಎದೆಗೆ ಎಟುಕದೆ ಕಿವಿಯ ಕೊನೆಗೇ ನಿಂತುಬಿಡುತ್ತವೆ. ಆದಕಾರಣದಿಂದ ಮುಂದೆ (ಪುಟ ೬೫ ರಿಂದ ೧೨೪) **ಸಪ್ತಪದಿಯ ಗದ್ಯಾನುವಾದವನ್ನು** ಒದಗಿಸಲಾಗಿದೆ. ಅಲ್ಲಿ ಈ ಪದ್ಯಗಳಿಗೆ ಅನ್ವಯಕ್ರಮವಾಗಿ ಅನುವಾದವನ್ನು ಬರೆದಿದೆ. ಎಲ್ಲೆಲ್ಲಿ ಸಂಸ್ಕೃತ, ಹಳಗನ್ನಡ ಪದಗಳಿಗೆ ಅರ್ಥವಾಗದೆ ಇರಬಹುದೋ ಅಲ್ಲೆಲ್ಲ ( ) ಈ ಪ್ರಕಾರವಾದ ಆವರಣದೊಳಗೆ ಅರ್ಥ ಕೊಟ್ಟಿದೆ. ಕೆಲವು ಕಡೆ, ಅದೇ ಆವರಣಗಳ ಒಳಗೆ, ಅರ್ಥದ ಜೊತೆಗೆ ಅಗತ್ಯವೆನ್ನಿಸಿದ ಕೆಲವು ವಿವರಣೆಗಳನ್ನು ಕೊಟ್ಟಿರುವುದೂ ಉಂಟು.

ಅಲ್ಲಿಗೂ ಏನಾದರೂ ಇನ್ನೂ ಅರ್ಥವಾಗದೆ ಕಷ್ಟ ಉಳಿದಿದ್ದರೆ, ಅಂಥವನ್ನು ಕಡೆಯ **ಟಿಪ್ಪಣಿಗಳು** ಎಂಬಲ್ಲಿ (ಪುಟ ೧೩೩ರಿಂದ ೧೩೬) ನೋಡಿಕೊಳ್ಳಬಹುದು.

ಮತ್ತೆ, ವಿವಾಹವಾಗುವ ವಧೂವರರು ವಿವಾಹವಾಗುವ ಕಾಲದಲ್ಲೂ ವಿವಾಹವಾದ ಅನಂತರದಲ್ಲೂ ವಿವಾಹದ ಮಂತ್ರಗಳನ್ನು ಅರ್ಥಮಾಡಿಕೊಂಡರೆ ವಾಸಿ ಎಂಬ ಉದ್ದೇಶದಿಂದ ವಿವಾಹದ ಮಂತ್ರಗಳಲ್ಲಿ ಮುಖ್ಯವಾದ ಕೆಲವನ್ನು ಆಯ್ದು (ಪುಟ ೧೨೫ ರಿಂದ ೧೩೧) ಕೊಟ್ಟಿದೆ. ಅದರ ಜೊತೆಗೆ, ನಮ್ಮ ಪ್ರಾಚೀನ ಧರ್ಮಶಾಸ್ತ್ರಕಾರರು ಹೇಳಿರುವ **ದಾಂಪತ್ಯ ಧರ್ಮವನ್ನು** ತಿಳಿಸುವ ಶ್ಲೋಕಗಳೂ ಪುಟ ೧೩೨ರಲ್ಲಿ ಇವೆ.

೨

ಹಳಗನ್ನಡದ ಪರಿಚಯ ಸಾಲದೆ, ಈ ಪುಸ್ತಕ ಓದುವವರಿಗೆ ಒಂದು ಎರಡು ಸೂಚನೆ.

ಮೊದಲಿಂದ ಓದಬೇಡಿ. ಅರುವತ್ತೈದನೆಯ ಪುಟದಿಂದ ತೊಡಗಿ.

ಒಟ್ಟಿಗೇ ಒಂದೇ ಸಲ ಉದ್ದಕ್ಕೆ ಅಷ್ಟನ್ನೂ ಓದಿ ಮುಗಿಸಿಬಿಡಲು ಆಶಿಸಬೇಡಿ. ಬೇಕಾದರೆ, ಒಂದು ಸಲ ಅಷ್ಟರಮೇಲೂ ಕಣ್ಣು ಓಡಿಸಿ; ಬಾಧಕವಿಲ್ಲ. ಆದರೆ, ಒಂದು ಸಲಕ್ಕೆ ಒಂದು ವಿಭಾಗವನ್ನು ಕಡೆಯಪಕ್ಷ ಎರಡೆರಡು ಸಲವಾದರೂ ಓದಿಕೊಂಡರೆ ಮೇಲು.

ಏಕೆಂದರೆ, ಇದು "ಖುಷಿ"ಗಾಗಿ ಓದಿ ಮುಗಿಸುವ ಪುಸ್ತಕವಲ್ಲ. ಕೊಂಚ ಕೊಂಚವಾಗಿ, ಸಾವಧಾನದಿಂದ, ಎತ್ತಿಕೊಂಡುದನ್ನು ಅಗಿದು ಅರಗಿಸಿಕೊಳ್ಳುತ್ತ, ಜೀವಕ್ಕೆ ಪುಷ್ಟಿ ಪಡೆಯುವುದಕ್ಕಾಗಿ, ಭಾವನೆಗಳನ್ನು ಬೆಳೆಸಿಕೊಳ್ಳಬೇಕೆಂಬ ಶ್ರದ್ಧೆಯಿಂದ ಭಕ್ತಿಯಿಂದ ತಿರುವಬೇಕಾದದ್ದು, ಈ ಸಪ್ತಪದಿ.

ಹೀಗೆ ಗದ್ಯಾನುವಾದವನ್ನು ಓದಿ ಮುಗಿಸಿ ಆದಮೇಲೆ, ನಿಮಗೆ ತುಂಬ ಮೆಚ್ಚಿಕೆಯಾದ ಭಾಗವನ್ನೋ ಅಥವಾ ಪದ್ಯವನ್ನೋ ಆಯ್ದುಕೊಂಡು, ಅದಕ್ಕೆ ಹೊಂದುವ ಮೂಲ ಹಳಗನ್ನಡ ಪದ್ಯವನ್ನು ಒಮ್ಮೆ ಓದಿರಿ. ಮೊದಲ ಓದಿಗೆ ಪದ್ಯ ನಾಲಿಗೆಗೆ ಸಿಕ್ಕದೆ ಹೋಗಬಹುದು. ಆದರೆ, ಬಿಡಬೇಡಿ, ಗದ್ಯದ ಮೂಗುದಾರವನ್ನು ಮೆಲ್ಲಗೆ ಎಳೆದು ಪದ್ಯದ ಪಡ್ಡೆಹಸುವನ್ನು ಹಿಡಿದು, ಭಾವದ ಹಾಲನ್ನು ಹೆಚ್ಚಿಸಿಕೊಳ್ಳಿರಿ.

ಈ ಪದ್ಯಗಳನ್ನು ಓದುವಾಗ, ನಿಮಗೆ ಲಿಪಿಯ ತೊಡಕಾದರೂ ಅದಷ್ಟುಮಟ್ಟಿಗೆ ಕಡಮೆಯಾಗಲೆಂದು, ಹಳಗನ್ನಡದ 'ಱ, ೞ' ಎಂಬ ಅಕ್ಷರಗಳನ್ನು ಈ ಮುದ್ರಣದಲ್ಲಿ ಹೊಸಗನ್ನಡದ 'ರ,ಳ'ಅಕ್ಷರಗಳಿಂದಲೇ ಕಾಣಿಸಿದ್ದೇನೆ.

ಈ ಪದ್ಯಗಳನ್ನು ಓದದೆ, ಬರಿಯ ಗದ್ಯ ಓದಿದ ಅಷ್ಟಕ್ಕೇ ನಿಲ್ಲಿಸಿಬಿಡುವುದೆಂದರೆ, ಹಣ್ಣಿನ ಹತ್ತುಪಾಲಿನಲ್ಲಿ ಎಂಟುಪಾಲಿನ ರಸವನ್ನು ಒಲ್ಲದೆ, ಎರಡು ಪಾಲು ತಿರುಳಿನ ಹೀದೆಯನ್ನು ಬಾಯಿಗೆ ಹಾಕಿಕೊಂಡ ಹಾಗೆ. ಗದ್ಯದಲ್ಲಿ ಇರುವ ನನ್ನ ಮಾತುಗಳನ್ನು ಓದುವುದಕ್ಕಿಂತ ಪದ್ಯದಲ್ಲಿರುವ ಪ್ರಾಚೀನ ಕವಿಗಳ ಮಾತುಗಳನ್ನು ಗಟ್ಟಿಯಾಗಿ ಓದಿಕೊಳ್ಳುವುದು ಏನು ಸುಖ, ಏನು ಹಿತ ಎಂಬುದನ್ನು ಕಾವ್ಯದ ಸವಿಬಲ್ಲವರೇ ಬಲ್ಲರು.

ಆದ್ದರಿಂದ, ಗದ್ಯಾನುವಾದದ ನಿಚ್ಚಣಿಕೆಯನ್ನು ಬಿಗಿಹಿಡಿದು ಹೆಜ್ಜೆಹೆಜ್ಜೆಯಾಗಿ ಹತ್ತಿಹೋಗಿರಿ. ಪ್ರಾಚೀನ ಕಾವ್ಯಸೌಧದ ಮೇಲೆ ಮುಟ್ಟಿ, ನಿಶ್ರೇಯಸವನ್ನು ಪಡೆಯಿರಿ.

ಈ ಸಪ್ತಪದಿಯೊಳಗಿನ ಕಾವ್ಯಭಾಗಗಳೆಲ್ಲವೂ ಶತಶತಮಾನಗಳ ಕಾಲದಿಂದ ಕೆಡದೆ ಕನ್ನಡಕ್ಕೆ ಮೂಗುತಿಯಾಗಿ, ಓಲೆಯ ಭಾಗ್ಯವಾಗಿ,

ಕೊರಳಿನ ಮಿನುಗಾಗಿ, ಹಸ್ತವಲಯಗಳಾಗಿ, ಹರಿದ್ರಾಕುಂಕುಮವಾಗಿ ನಿಡಿದುಕಾಲದಿಂದ ನಡೆದುಬಂದಿರುವ ಮುತ್ತೈದೆತನದ ಮಹಾಕವಿಗಳಿಂದಲೂ ಒಬ್ಬಾಕೆ ಕವಯಿತ್ರಿಯಿಂದಲೂ ಆಯ್ದುತಂದ ಉತ್ತಮ ಕೃತಿಖಂಡಗಳು. ಇಂಥ ಕಡೆ, ನೇರಾಗಿ ಅವರ ಮಾತಿಗೇ ಕಿವಿ ಕೊಡುವುದರಿಂದ ಕೇಳಿದವರ ಕಿವಿಗೆ ಹಿತ, ಮನಸ್ಸಿಗೆ ಮಂಗಲ, ಜೀವಕ್ಕೆ ಶೋಭಾನ.

೩

ಈಗ ಪದ್ಯವಿಭಾಗಗಳನ್ನೂ ಆದರ ಕರ್ತೃಗಳನ್ನೂ ಕುರಿತು ಎರಡೆರಡು ಮಾತು ಹೇಳುವುದು ಪ್ರಕೃತ.

**ನಾಂದೀಮಂಗಲವನ್ನು** '**ಹದಿಬದೆಯ ಧರ್ಮ**' ದಿಂದ ಆಯ್ದುಕೊಂಡಿದೆ. ಹದಿಬದೆ ಎಂದರೆ ಪತಿವ್ರತೆ. ಪತಿವ್ರತಾ ಧರ್ಮವನ್ನು ಕುರಿತು ಕನ್ನಡದಲ್ಲಿ ಮುದ್ದಾದ ಸಾಂಗತ್ಯಗಳನ್ನು ಬರೆದ **ಸಂಚಿಯ ಹೊನ್ನಮ್ಮ** ಎಂಬವಳು ಹದಿನೇಳನೇ ಶತಮಾನದ ಉತ್ತರಾರ್ಧದಲ್ಲಿ ಮೈಸೂರಿನ ಅರಸರಾಗಿದ್ದ ಶ್ರೀ ಚಿಕದೇವರಾಜರಿಗೆ ಎಲೆ ಅಡಿಕೆಯ ಚೀಲ ಹೊರುವ ಊಳಿಗ ಮಾಡುತ್ತಿದ್ದಳು. ಈಕೆ ತನ್ನ ಕಾವ್ಯದ ಪ್ರತಿಯೊಂದು ಸಂಧಿಯ ಆರಂಭದಲ್ಲಿಯೂ ಎರಡೆರಡು ಪದ್ಯಗಳನ್ನು ತನ್ನ ದೇವರಿಗೆ ಮೀಸಲುಮಾಡಿ, ಮೊದಲನೆಯದರಲ್ಲಿ ವಿಷ್ಣುವನ್ನೂ ಎರಡನೆಯದರಲ್ಲಿ ವಿಷ್ಣುಪತ್ನಿಯನ್ನೂ ಸ್ತುತಿಮಾಡುತ್ತ; ಆ ಪ್ರಸ್ತಾಪದಲ್ಲಿಯೇ ಅವರಿಬ್ಬರ ಗಾಢವಾದ ಅನ್ಯೋನ್ಯತೆಯನ್ನು ಚಿತ್ರಿಸಿದ್ದಾಳೆ. ಇಲ್ಲಿ ಆ ಅವಳಿಪದ್ಯಗಳನ್ನೆಲ್ಲ ಒತ್ತಟ್ಟಿಗೆ ಮಾಲೆ ಕಟ್ಟಿದೆ.

**ಶ್ರೀ ಪಾರ್ವತೀ ಪರಮೇಶ್ವರರ ವಿವಾಹ** ಹನ್ನೆರಡನೆಯ ಶತಮಾನದಲ್ಲಿ **ಹರಿಹರ** ಎಂಬ ಕವಿವರನು ರಚಿಸಿದ **ಗಿರಿಜಾ ಕಲ್ಯಾಣ**ದಿಂದ ಉದ್ಧರಿಸಿದ್ದು. ಈ ಉದಾಹರಣೆಯ ಔಚಿತ್ಯ ಸ್ವಯಂಸ್ಪಷ್ಟ. ಹಿಂದಿನ ಜನ್ಮದಲ್ಲಿ ಹರನಿಗೆ 'ಸತಿ'ಯಾಗಿದ್ದ ದಾಕ್ಷಾಯಿಣಿ, ತನ್ನ ಪತಿಯ ನಿಂದೆಯನ್ನು ಕೇಳಲಾರದೆ ಅಗ್ನಿಕುಂಡದಲ್ಲಿ ದೇಹತ್ಯಾಗ ಮಾಡಿ, ಮುಂದಿನ ಜನ್ಮದಲ್ಲಿ ಹಿಮವಂತನ ಮಗಳಾದಳು. ಆಗ ಗಿರಿಜೆ ತನ್ನ ರೂಪವಿಲಾಸ ಅತಿಶಯಗಳಿಂದ ಈಶ್ವರನನ್ನು ಒಲಿಸಿಕೊಳ್ಳಲು ಆರದೆ, ಅಘೋರವಾದ

ತಪಸ್ಸು ಮಾಡಿ, ಪರಶಿವನನ್ನು ಮೆಚ್ಚಿಸಿ ಮದುವೆಯಾದಳು. ಇವರ ದಾಂಪತ್ಯದ ಫಲವಾಗಿ ಜನಿಸಿದ ಕುಮಾರಸ್ವಾಮಿಯೇ ದೇವತೆಗಳಿಗೆ ಬಾಧೆಕೊಡುತ್ತಿದ್ದ ತಾರಕಾಸುರನನ್ನು ಸಂಹಾರಮಾಡಿದ್ದು. ಈ ಇಂಥ ದೇವಸೇನಾಪತಿಯನ್ನು ಪಡೆಯುವುದಕ್ಕಾಗಿಯೇ ಶಿವನು ಪಾರ್ವತಿಯ ಪಾಣಿಗ್ರಹಣಮಾಡಿದ್ದು.

**ಶ್ರೀ ಸೀತಾರಾಮರ ವಿವಾಹ**ವನ್ನು ತನ್ನ **ರಾಮಚಂದ್ರಚರಿತ ಪುರಾಣ**ದಲ್ಲಿ ಚಿತ್ರಿಸಿರುವವನು **ನಾಗಚಂದ್ರ.** ಸುಮಾರು ಹನ್ನೊಂದನೆಯ ಶತಮಾನದವನು. ಇವನಿಗೆ 'ಅಭಿನವಪಂಪ' ಎಂದು ಬಿರುದು. ಶ್ರೀರಾಮನಿಗೆ ಸೀತೆಯನ್ನು ಒಪ್ಪಿಸಿಕೊಡುವಾಗ 'ಇವಳು ನಿನ್ನ ಜೊತೆಗೆ ಧರ್ಮವನ್ನು ನಡಸುತ್ತಾಳೆ' ಎಂದು ಜನಕನು ಹೇಳಿ ಒಪ್ಪಿಸಿದನು. ಪತಿಯನ್ನು ದೈಹಿಕವಾಗಿ ಅಗಲಿದ್ದು ಏನೇನು ಪಾಡುಪಡಬೇಕಾಗಿ ಬಂದರೂ, ಸೀತೆಯ ಮನಸ್ಸಿನಿಂದ ಒಂದು ಕ್ಷಣಾಂಶವಾದರೂ ರಾಮನ ವಿಗ್ರಹ ಮರೆಯಾಗಲಿಲ್ಲ. ರಾಮನಾದರೂ ಅಷ್ಟೆ: ಸೀತೆಯಲ್ಲದೆ ಬೇರೆ ಯಾರನ್ನೂ ಮನಸ್ಸಿನಿಂದಲೂ ಸ್ಮರಿಸದೆ, ಏಕಪತ್ನೀವ್ರತಸ್ಥನಾಗಿದ್ದನೆಂಬುದು ಭಾರತವೆಲ್ಲ ತಿಳಿದದ್ದೇ.

**ಶ್ರೀ ಕೃಷ್ಣರುಕ್ಮಿಣಿಯರ ವಿವಾಹ** ನಡೆದ ಕಥೆ ಅದೊಂದು ವೀರರಸದ ಶೃಂಗಾರಕಥೆ. ಅವಳನ್ನು ಶಿಶುಪಾಲನಿಗೆ ಕೊಡಬೇಕೆಂದು ಅವಳ ಅಣ್ಣನಾದ ರುಕ್ಮಿಗೆ ಇಷ್ಟ. ಅವಳಿಗಾದರೋ ಕೃಷ್ಣನಲ್ಲಿ ಅನುರಾಗ. ಕೃಷ್ಣನಿಗೂ ಅವಳನ್ನು ಪಡೆಯಲು ಬೇಕು ಒಬ್ಬರೊಬ್ಬರಿಗೆ ಒಲಿದ ಅವರವರೇ ಗುಟ್ಟಾಗಿ ಸುದ್ದಿ ಕಳುಹಿಸಿಕೊಂಡು, ಕೃಷ್ಣ ರುಕ್ಮಿಣಿಯನ್ನು ಅಪಹಾರಮಾಡಿಕೊಂಡು ಹೋದ. ತನ್ನನ್ನು ಬೆನ್ನಟ್ಟಿ ಬಂದವರೊಡನೆ ಕೃಷ್ಣ ಯುದ್ಧ ಮಾಡಬೇಕಾಗಿ ಬಂದಾಗ, ರುಕ್ಮಿಣಿ ಅವನಿಗೆ ಸಾರಥ್ಯವನ್ನು ಮಾಡಿದಳು. ಈ ದಂಪತಿಗಳ ಮಗನೇ ಪ್ರದ್ಯುಮ್ನ—ಹಿಂದಿನ ಜನ್ಮದಲ್ಲಿ ಮನ್ಮಥನಾಗಿ ಇದ್ದವನು, ಈ ಜನ್ಮದಲ್ಲಿ ಶಂಬರಾಸುರನನ್ನು ಸಂಹಾರಮಾಡಿದವನು. ಈ ವಿವಾಹದ ಚಿತ್ರವನ್ನು ಹನ್ನೆರಡನೆಯ ಶತಮಾನದಲ್ಲಿದ್ದ **ರುದ್ರಭಟ್ಟ**ನು ಬರೆದ '**ಜಗನ್ನಾಥ ವಿಜಯ**'ದಿಂದ **ಎತ್ತಿಕೊಂಡಿದೆ.**

**ಸುಭದ್ರಾರ್ಜುನರ ವಿವಾಹ**—ಇದು ಹತ್ತನೆಯ ಶತಮಾನದಲ್ಲಿದ್ದ **ಪಂಪ** ಕವಿಯ ಸುಪ್ರಸಿದ್ಧವಾದ **ವಿಕ್ರಮಾರ್ಜುನ ವಿಜಯ** ಎಂಬ 'ಸಮಸ್ತಭಾರತ'ದಿಂದ ಆಯ್ದುಕೊಂಡದ್ದು. ಭಾಗವತದ ಕಥೆಯಲ್ಲಿ ಶ್ರೀಕೃಷ್ಣ ರುಕ್ಮಿಣಿಯರ ಮದುವೆ ಹೇಗೋ ಹಾಗೆಯೇ ಭಾರತದಲ್ಲಿ ಸುಭದ್ರಾರ್ಜುನರ ವಿವಾಹದ ಕಥೆ. ಸುಭದ್ರೆಯನ್ನು ದುರ್ಯೋಧನನಿಗೆ ಕೊಡಬೇಕೆಂದು ಬಲದೇವನ ಅಭಿಪ್ರಾಯ. ಅದನ್ನು ತಪ್ಪಿಸಿ, ಅವಳನ್ನು ತನ್ನ ಪ್ರಿಯಸಖನಾದ ಅರ್ಜುನನಿಗೆ ಕೊಡಬೇಕೆಂದು ಕೃಷ್ಣನ ಇಷ್ಟ. ಕಡೆಗೆ, ಕೃಷ್ಣನ ಉಪಾಯದಿಂದ ಸುಭದ್ರೆ ಅರ್ಜುನನ ಕೈಹಿಡಿಯುತ್ತಾಳೆ. ಇವರ ಮಗನಾದ ಅಭಿಮನ್ಯು ವಯಸ್ಸಿನಲ್ಲಿ ಚಿಕ್ಕವನಾದರೂ ಪರಾಕ್ರಮದಲ್ಲಿ ಮಹಾಮಹಿಮನೆಂದು ಹೆಸರಾದನು.

**ಶ್ರೀಮತಿ ವಜ್ರಜಂಘರ ವಿವಾಹ**—ಎಂಬುದು ಇದು ಜಗತ್ತಿನ ಅತ್ಯುತ್ಕೃಷ್ಟವಾದ ಪ್ರಣಯಕಥೆಗಳಲ್ಲಿ ಸೇರಲು ತಕ್ಕದ್ದು. ಇದನ್ನು **ಪಂಪ**ಕವಿ ತನ್ನ **ಆದಿಪುರಾಣ** ಎಂಬ ಕೃತಿಯಲ್ಲಿ ಬಹು ಸುಂದರವಾಗಿ ನಿರೂಪಿಸಿದ್ದಾನೆ. ಈ ಶ್ರೀಮತಿ ಮತ್ತು ವಜ್ರಜಂಘ ಎಂಬ ಜೀವರುಗಳ ಸ್ನೇಹ ಹಿಂದಿನ ಜನ್ಮಗಳಲ್ಲಿ ಹೇಗಿತ್ತು, ಈ ಜನ್ಮದಲ್ಲಿ ಹೇಗೆ ಆಯಿತು, ಮುಂದಿನ ಆರು ಜನ್ಮಗಳಲ್ಲಿ ಏನಾದುದು ಎಂಬುದರ ಸಂಕ್ಷೇಪ ಕಥೆಯನ್ನು ಇದೇ ಪುಸ್ತಕದ 'ಟಿಪ್ಪಣಿಗಳು' ಎಂಬುದರಲ್ಲಿ(ಪುಟ ೧೩೫) ಕಾಣಬಹುದು.

**ಭರತ ಸುಭದ್ರಾದೇವಿಯರ ವಿವಾಹ**—ಇದು **ರತ್ನಾಕರ** ಎಂಬ ಸುಮಾರು ಹದಿನಾರನೇ ಶತಮಾನದ ಕವಿ ಬರೆದಿರುವ **ಭರತೇಶ ವೈಭವ** ಎಂಬ ಕೃತಿಯಿಂದ ಎತ್ತಿಕೊಂಡದ್ದು. ದಾಂಪತ್ಯ ಜೀವನದಲ್ಲಿ ಏನೇನು ಭೋಗಗಳನ್ನು ಅನುಭವಿಸಬಹುದು ಎಂಬುದನ್ನು ರತ್ನಾಕರ ವರ್ಣಿಸಿದ ಮಟ್ಟಕ್ಕೆ ಬೇರೆ ಯಾವ ಕವಿಯೂ ವರ್ಣಿಸಲಿಲ್ಲವೆಂದು ಸಂಕೋಚವಿಲ್ಲದೆ ಹೇಳಬಹುದು. ಉತ್ತಮನಾದ ವರನು ಉತ್ತಮೆಯಾದ ವಧುವನ್ನು ಪಡೆದ ಒಂದು ತುಂಬುಚಿತ್ರವನ್ನು ಚಿತ್ರಿಸಬೇಕೆಂದು ರತ್ನಾಕರನು ಬರೆದ 'ಸ್ತ್ರೀರತ್ನ ಸಂಭೋಗ' ಸಂಧಿಯಿಂದ ಈ ಮದುವೆಯ ಭಾಗವಷ್ಟನ್ನು ಮಾತ್ರ ಎತ್ತಿಕೊಟ್ಟಿದೆ.

**ರತಿಮನ್ಮಥರ ಮನೆವಾರ್ತೆ** — ಎಂಬುದು **ಆಂಡಯ್ಯ** ಎಂಬವನು ಹದಿಮೂರನೇ ಶತಮಾನದಲ್ಲಿ ಬರೆದ **ಕಬ್ಬಿಗರ ಕಾವ** ಎಂಬ ಕೃತಿಯ ಕೊನೆಯ ಭಾಗದಿಂದ, ಒಂದೆರಡು ಪದಗಳನ್ನು ವ್ಯತ್ಯಾಸಮಾಡಿ, ಹೊಂದಿಸಿಕೊಂಡದ್ದಾಗಿದೆ. ರತಿಗೂ ಮನ್ಮಥನಿಗೂ ಎಲ್ಲಿ ಮದುವೆ ಯಾಯಿತು, ಯಾವಾಗ ಆಯಿತು, ಇದನ್ನು ಕುರಿತು ಯಾರಾದರೂ ಎಲ್ಲಿಯಾದರೂ ಹಾಡಿರುವರೋ ನಾನು ಕಾಣೆ ಆದರೆ, ರತಿ ಮನ್ಮಥರ ಉಪಮಾನವನ್ನು ಉದಾಹರಿಸದೆ ಗಂಡುಹೆಣ್ಣುಗಳ ಹೆಸರೆತ್ತುವುದೂ ವಿರಳ. ಇಂತಹ ಸರ್ವಸುಂದರರ ನಿತ್ಯಜೀವನ ಹೇಗಿತ್ತಂತೆ ಎಂಬುದನ್ನು ಈ ಕವಿಯ ಮಾತುಗಳಲ್ಲಿ ನಾವು ನೋಡಬಹುದು.

**ಸೋಬಾನೆ**ಯಾಗಿ ಉದ್ಧರಿಸಿರುವ **ಬಿಡಿ** ಪದ್ಯಗಳನ್ನು ಬರೆದ **ಸರ್ವಜ್ಞ** ಯಾರೋ ತಿಳಿಯದು, ಎಂದು ಎಲ್ಲಿ ಇದ್ದನೋ ಅದೂ ತಿಳಿಯದು. ಆದರೂ ಆತನು ಮುಟ್ಟದೆ ಬಿಟ್ಟ ವ್ಯವಹಾರಜ್ಞಾನದ ಒಂದು ಅಂಶವು ಕೂಡ ಇಲ್ಲ, ಎಂಬಂತೆ ಲೌಕಿಕ ಪಾರಲೌಕಿಕಗಳನ್ನೆಲ್ಲಾ ಆತ ತನ್ನ ತ್ರಿಪದಿಗಳಲ್ಲಿ ಎರಚಿಕೊಂಡು ಹೋಗಿದ್ದಾನೆ. ಸಂಸಾರದ ಸಾರಸರ್ವಸ್ವ ಏನು ಎಂಬುದು ಈ ಐದು ತ್ರಿಪದಿಗಳಲ್ಲಿ ಸಂಗ್ರಹವಾಗಿ ಅಡಗಿದೆ.

೪

ಮೇಲೆ ಹೆಸರಿಸಿದ ಕವಿಗಳ ಕಾವ್ಯಗಳಿಂದಲೂ ಮತ್ತೆ ಒಂದೆರಡು ಇತರ ಕೃತಿಗಳಿಂದಲೂ ಇನ್ನು ಕೆಲವು ಭಾಗಗಳನ್ನು ಆರಿಸಿಕೊಂಡು ಮುಂದಿನ ಪರಿಶಿಷ್ಟವನ್ನು (ಪುಟ ೩೩ ರಿಂದ) ಸಿದ್ಧಪಡಿಸಿರುತ್ತದೆ. ಅವು ಯಾವುವೆಂದರೆ:

**ಹೆಣ್ಣಿನ ಹಿರಿಮೆ**—ಸಂಚಿಯ ಹೊನ್ನಮ್ಮನ 'ಹದಿಬದೆಯ ಧರ್ಮ' ದಿಂದ. ಸ್ತ್ರೀಯರ ಪರವಾಗಿ ಪುರುಷವರ್ಗಕ್ಕೆ 'ಸವಾಲು' ಹಾಕಿ, ಹೆಣ್ಣಿನ ಹಿರಿಮೆಯನ್ನು ಮುಕ್ತಕಂಠವಾಗಿ ಹಿಡಿದೆತ್ತಿ, ಸ್ಥಾಪಿಸಿದ ಹೊನ್ನಮ್ಮನ ಹದವಾದ ಇನಿಯ ಮಾತುಗಳನ್ನು ಕೇಳಿ ಒಪ್ಪದಿರುವುದು ಸಾಧ್ಯವೇ ಇಲ್ಲ. ಅಷ್ಟು ಯುಕ್ತಿಯುಕ್ತವಾಗಿದೆ, ಈಕೆಯ ಮಾತು.

**ಹೆಣ್ಣನ್ನು ಕೇಳುವುದು**— ಮದುವೆಗೆ ನೆರೆದ ಹೆಣ್ಣುಮಕ್ಕಳನ್ನು ಗಂಡಿರುವ ಮನೆಮನೆಗೂ ಸುತ್ತಿಸಬೇಕಾಗಿ ಬಂದಿರುವ ಈ ದುಷ್ಟ

ಕಾಲದಲ್ಲಿ ಇಂತಹ ಹಿಂದಿನ ಕಾಲದ ಸಚ್ಚಿತ್ರಗಳನ್ನು ಓದಿದರೆ ಉಲ್ಲಾಸ ಆಗುತ್ತದೆ. ಇದರಲ್ಲಿ ಮೊದಲನೆಯದು ಹರಿಹರನ 'ಗಿರಿಜಾ ಕಲ್ಯಾಣ' ದಿಂದ—ಈಶ್ವರನು ಪಾರ್ವತಿಯನ್ನು ಬೇಡಿಬರುವಂತೆ ಸಪ್ತರ್ಷಿಗಳ ದೌತ್ಯವನ್ನು ಕಳುಹುವುದು. ಎರಡನೆಯದು ಪಂಪನ 'ಆದಿಪುರಾಣ' ದಿಂದ — ಗಂಡಿನ ತಂದೆಯು ಹೆಣ್ಣಿನ ತಂದೆಯನ್ನು ತಾನಾಗಿಯೇ ಬೀಯಗತನಕ್ಕೆ ಪ್ರಾರ್ಥಿಸುವುದು.

**ವಿವಾಹಮಂಟಪ–ಮಂಗಲದ್ರವ್ಯ–ವರ್ಣನ**—ಇದು ರುದ್ರಭಟ್ಟನ 'ಜಗನ್ನಾಥ ವಿಜಯು'ದಲ್ಲಿ ಕೃಷ್ಣರುಕ್ಮಿಣಿಯರಿಗೆ ಮದುವೆಯಾಗುವ ಸಂದರ್ಭದ ವರ್ಣನೆಯಿಂದ ಆಯ್ದದ್ದು.

**ವರನ ಮಂಗಳಾಚಾರ**—ಮೊದಲನೆಯದು 'ಜಗನ್ನಾಥ ವಿಜಯ' ದಿಂದ; ಕೃಷ್ಣನಿಗೆ ಎಣ್ಣೆ ಹಚ್ಚಿದ್ದು, ಸ್ನಾನಮಾಡಿಸಿದ್ದು, ಅಲಂಕಾರ ಮಾಡಿದ್ದು. ಎರಡನೆಯದು 'ಆದಿಪುರಾಣ'ದಿಂದ; ವಜ್ರಜಂಘನಿಗೆ ಬೇರೆಬೇರೆ ಆಭರಣಗಳನ್ನು ತೊಡಿಸಿದ್ದು

**ವಧುವಿನ ಮಂಗಳಾಲಂಕಾರ**—ಮೊದಲನೆಯದು ನಾಗಚಂದ್ರನ 'ರಾಮಚಂದ್ರಚರಿತಪುರಾಣ'ದಿಂದ; ಸೀತೆಗೆ ಸ್ನಾನವನ್ನು ಮಾಡಿಸಿದ, ಮೈಯೊರಸಿದ, ಉಡಿಗೆ ಉಡಿಸಿದ, ತೊಡಿಗೆ ತೊಡಿಸಿದ, ನವುರುನವುರು ಆದ ನಿರಿನಿರಿಯ ವರ್ಣನೆ. ಎರಡನೆಯದು ಪಂಪನ 'ವಿಕ್ರಮಾರ್ಜುನ ವಿಜಯು'ದಿಂದ; ಸ್ವಯಂವರದ ಸಮಯದಲ್ಲಿ ದ್ರೌಪದಿಗೆ ಸಖಿಯರು ನೆರವೇರಿಸಿದ ರಸಾಲಂಕಾರದ ವಿವರಣೆ ಮೂರನೆಯದು ರತ್ನಾಕರನ ಭರತೇಶವೈಭವದ 'ಮದುವೆಯ ಸಂಭ್ರಮದ ಸಂಧಿ'ಯಿಂದ; ಇದು ಕೇವಲ ಅಲಂಕರಣದ ವರ್ಣನೆ ಮಾತ್ರವಾಗಿರದೆ, ಆ ಸಮಯಗಳಿಗೆ ಸಹಜವಾದ ಒಂದು ಹಾಸ್ಯಪ್ರಕರಣದ ಅಲೆಯನ್ನೂ ಒಳಕೊಂಡಿದೆ.

**ವಿವಾಹ ಮಂಗಲ**—ಇದೊಂದು ಸಂಕೀರ್ಣಕವರ್ಗ. ಮದುವೆಯ ಮೊದಲಿನಿಂದ ಹಿಡಿದು ಅದು ಮುಗಿಯುವ ವರೆಗೂ ಯಾವುಯಾವುದು ಮುಖ್ಯವಾದ ಹೆಜ್ಜೆಗಳೋ—ಮದುವೆಯ ಮನೆ, ಅದರೊಳಗೆ ಇರುವ ಮಂಟಪ, ಅದರ ನಡುವಿನ ಜಗುಲಿ, ಅಲ್ಲಿನ ಪೂರ್ಣಕುಂಭ, ಅದರ ಸುತ್ತಿನ ಸಕಲಮಂಗಲವಸ್ತುಗಳು, ಪುರೋಹಿತರ ಸಡಗರ, ಹೆಂಗುಸರ

ಸಂಭ್ರಮ, ವಧೂ ಬಂದದ್ದು, ವರ ಬಂದದ್ದು, ಅವರು ಮೆಟ್ಟಕ್ಕಿಯನ್ನು ಮೆಟ್ಟನಿಂತಾಗ ತೆರೆ ಸರಿದದ್ದು, ಕೈಗೆ ಧಾರೆಯೆರೆದದ್ದು, ಪಾಣಿಗ್ರಹಣ, ಲಾಜಹೋಮ, ಅಗ್ನಿಯ ಪ್ರದಕ್ಷಿಣೆ, ವರನು ವಧುವಿನ ಕಾಲುಹಿಡಿದು ಸಪ್ತಪದಿ ನಡಸಿದ್ದು, ಮುತ್ತೈದೆಯರ ಆಶೀರ್ವಾದ, ವಧೂವರರ ಬೇಟದ ನೋಟ, ಮದುವೆಗೆ ಬಂದವರಿಗೆ ಬಾಗಿನ ಬೀರಿದ್ದು, ದಕ್ಷಿಣೆ ಕೊಟ್ಟದ್ದು—ಇವುಗಳೆಲ್ಲ ಇಲ್ಲಿ ಸೂಚಿತವಾಗಿವೆ. ಈ ವರ್ಗದ ಪದ್ಯಗಳಲ್ಲಿ ೧ ರಿಂದ ೬ ರವರೆಗೆ ನಾಗಚಂದ್ರನ 'ರಾಮಚಂದ್ರ ಚರಿತಪುರಾಣ'ದಿಂದ ತೆಗೆದದ್ದು, ಮತ್ತೆ ೭ ರಿಂದ ೨೫ ರವರೆಗೆ ಹದಿಮೂರನೇ ಶತಮಾನದ **ಮಲ್ಲಿಕಾರ್ಜುನ**ನೆಂಬವನು ಕ್ರೋಡೀಕರಿಸಿದ **'ಸೂಕ್ತಿಸುಧಾರ್ಣವ'** ಎಂಬ ಸಂಕಲನದಿಂದ ಆಯ್ದುದ್ದು.

**ಬಾಗಿಲು ತಡೆದದ್ದು**—ರತ್ನಾಕರನ 'ಭರತೇಶ ವೈಭವ' ದಿಂದ. ಹಳೆಯಕಾಲದ ರಸಿಕ ಪದ್ಧತಿಗಳಲ್ಲಿ ಒಂದಾದ ಈ ಮದುವೆಯ ಸರಸಾಂಗವನ್ನು ಓದಿದರೆ, ಕಿವಿ ಕೊನರುತ್ತದೆ.

**ಹೆತ್ತವರ ಹಿತವಚನ**—ಹೆಣ್ಣನ್ನು ಒಪ್ಪಿಸುವುದು ಪ್ರತಿ ಮದುವೆಯ ಮರೆಯಲಾರದ ಅಂಗ; ಬೇರೆ ಯಾರಿಗೆ ಅಲ್ಲದಿದ್ದರೂ ಹೆಣ್ಣನ್ನು ಹೆತ್ತವರಿಗೆ. ಹಳೆಯ ಸಂಸ್ಕೃತ ಸಾಹಿತ್ಯದಲ್ಲಿ ಕಾಳಿದಾಸನ ಶಾಕುಂತಲಾ ನಾಟಕದಲ್ಲಿನ ನಾಲ್ಕನೆಯ ಅಂಕದ ಕಣ್ವರ ಮಾತುಗಳೂ (ಇದೇ ಪುಸ್ತಕದ ಪುಟ ೧೩೬ ನೋಡಿ) ಹೊಸಗನ್ನಡ ಸಾಹಿತ್ಯದಲ್ಲಿ ಶ್ರೀ ವಿ. ಸೀತಾರಾಮಯ್ಯನವರು ಬರೆದಿರುವ

> 'ಎಮ್ಮ ಮನೆಯಂಗಳದಿ ಬೆಳೆದೊಂದು ಹೂವನ್ನು
> ನಿಮ್ಮ ಮಡಿಲೊಳಗಿಡಲು ತಂದಿರುವೆವು'

ಎಂಬ ಹಾಡೂ ('ದೀಪಗಳು' ಎಂಬ ಸಂಗ್ರಹ ನೋಡಿ) ಬಹುಶಃ ಅನೇಕರಿಗೆ ಗೊತ್ತಿರುವುದು. ಅದೇ ವರ್ಗಕ್ಕೆ ಸೇರಿದ್ದು ಇಲ್ಲಿನ ಮಾತುಗಳು. ಇದರಲ್ಲಿ ಮೊದಲನೆಯದು ಪಂಪನ "ಆದಿಪುರಾಣ" ದಿಂದಲೂ ಎರಡನೆಯದು **ಅಗ್ಗಳ** ಎಂಬ ಹನ್ನೆರಡನೇ ಶತಮಾನದ ಕವಿಯ **ಚಂದ್ರಪ್ರಭಪುರಾಣ**ದಿಂದಲೂ ಆಯ್ದು ತಂದವು.

**ಸಪ್ತಪದಿ**

೫

**ವಿವಾಹದ ಕೆಲವು ಮುಖ್ಯ ಮಂತ್ರಗಳು**—ಎಂಬ ವಿಭಾಗವನ್ನೂ **ದಾಂಪತ್ಯ ಧರ್ಮ** ಎಂಬುದನ್ನೂ ಹೊಂದಿಸುವ ಸಂದರ್ಭದಲ್ಲಿ ಈ ಎರಡು ಪುಸ್ತಕಗಳಿಂದ ತುಂಬ ಉಪಕೃತನಾಗಿದ್ದೇನೆ :

೧. **THE VEDIC LAW OF MARRIAGE**—
A MAHADEVA SASTRI B A., M.R.A.S., Mysore, 1908.

೨ **ವಿವಾಹ ಮಂಗಳ** (ಬಂಗಾಳಿಯ ಸಂಗ್ರಹವನ್ನು ಅನುಸರಿಸಿದುದು)—ಆರ್. ವ್ಯಾಸರಾವ್ ಅವರಿಂದ. ರಾಮಮೋಹನ ಕಂಪೆನಿ, ಬೆಂಗಳೂರು ೧೯೩೦.

೬

ಹೀಗೆ, ಉತ್ತಮರಾದ ಕನ್ನಡ ಕವಿಗಳ ಕಾವ್ಯಖಂಡಗಳನ್ನೂ ಚಿರ ಸ್ಮರಣೀಯಗಳಾದ ವಿವಾಹದ ಚಿತ್ರಗಳನ್ನೂ ಬಣ್ಣಬಣ್ಣದ ವಿವಿಧ ವಿವಾಹ ಸಾಧನ ಸಂಪತ್ತಿಯ ವರ್ಣನೆಗಳನ್ನೂ ವೇದೋಕ್ತವಾದ ವಿವಾಹಮಂತ್ರಗಳ ಪರಿಚಯವನ್ನೂ ದಾಂಪತ್ಯಧರ್ಮದ ರೂಪುರೇಖೆಯನ್ನೂ ಒಳಕೊಂಡು, ಅದನ್ನು ಅರ್ಥಮಾಡಿಕೊಳ್ಳುವುದಕ್ಕೆ ಬೇಕಾಗುವ ಅನುವಾದವನ್ನೂ ಟಿಪ್ಪಣಿಗಳನ್ನೂ ಸಂಗಡ ಹೊಂದಿ, ಸಿದ್ಧವಾಗಿರುವ ಈ **ಸಪ್ತಪದಿ** ಎಂಬ ಪುಸ್ತಕವು ವಧೂವರರ, ಪತಿಪತ್ನಿಯರ ಕೈತುಂಬ ತುಂಬಿ ಇರಲಿ, ಬಗೆಯ ತುಂಬ ತುಂಬಿ ಬರಲಿ

೨೬—೪—೧೯೫೧
ಮಲ್ಲೇಶ್ವರಂ, ಬೆಂಗಳೂರು.

**ಜಿ. ಪಿ. ರಾಜರತ್ನಂ.**

ಪುಟ

# ನಾಂದೀ ಮಂಗಲ

ಶ್ರೀಮದಮಲಗುಣನಿಧಿಗೆ ನಿತ್ಯನಿಗೆ ನಿ-
ಸ್ಸೀಮ ಕೃಪಾವಾರಿಧಿಗೆ
ರಾಮಣೀಯಕರಾಶಿಗೆ ಪಶ್ಚಿಮ ರಂಗ-
ಧಾಮನಿಗಾನೆರಗುವೆನು ೧

ರಂಗಧಾಮನ ದಿವ್ಯಾಂಗ ಸಂಗತಿಯಿಂ
ಮಂಗಳದೇವತೆಯೆನಿಪಾ
ರಂಗಮಂದಿರ ಮಂಗಳ ವೈಜಯಂತಿಗೆ
ರಂಗನಾಯಕಿಗೆರಗುವೆನು ೨

ಮಂಗಳ ಗುಣಗಣನಿಧಿಗೆ ನಿರ್ಮಲನಿಗು-
ತ್ತುಂಗ ಮಹಿಮಗೆ ಮಾಧವಗೆ
ಸಂಗತಜನಸರ್ವಫಲದಗೆ ಪಶ್ಚಿಮ-
ರಂಗಧಾಮನಿಗೆರಗುವೆನು ೩

ಇಂಗೋಲನ ತಾಯಿಗಿಂಗದಿರನ ತಂಗಿ-
ಗಿಂಗಡಲಣುಗಿಗಿಂದಿರೆಗೆ
ರಂಗಧಾಮನ ರಾಣಿಗೆ ರಾರಾಜಿಪ
ರಂಗನಾಯಕಿಗೆರಗುವೆನು ೪

ಶ್ರೀಭೂಮಿನೀಳಾನಾಥನಿಗನುಪಮ
ವೈಭವ ವೈಕುಂಠಪತಿಗೆ
ಸ್ವಾಭಾವಿಕಶುಭಗುಣನಿಧಿಗಂಬುಜ-
ನಾಭನಿಗಾನೆರಗುವೆನು ೫

ದೇವ ಮಾನವ ಮೃಗ ನಗರೂಪದ ವಾಸು-
ದೇವನ ವಿಭವಂಗಳನು
ಆ ವಿಧದೊಡಲವೆತ್ತನುಸರಿಸುವ ಲ-
ಕ್ಷ್ಮೀ ವಧುವನು ವಂದಿಪೆನು ೬

ನಂದನ ಮೋಹದ ನಂದನ ಸನಕಸ-
ನಂದನ ವಂದಿತ ಚರಣ
ಮಂದರಧರ ಮಾಧವ ಗೋವಿಂದ ಮು-
ಕುಂದ ದೇವನೆ ಸಲಹೆನ್ನ ೭

ಎಂದೆಂದುಮಿನಿಯನೊಳಿರೆ ಹೊರೆಯಿಲ್ಲದ
ಚಂದದಿಂದೆರ್ದೆಯೊಳು ನಿಂದ
ಇಂದುಸೋದರಿಗಿಂದೀವರಮಂದಿರೆ-
ಗಿಂದಿರೆಗಿಂದು ವಂದಿಪೆನು ೮

ಅಮರ್ದುಗಡೆವ ಸಮಯದೊಳಲ್ಲಿ ನೆರೆದಿ-
ರ್ದಮರರಂತಚ್ಚರಿವಡೆಯೆ
ಕಮಲೆಗೆದೆಯನಿಂಬುಗೊಳಿಸಿದ ಪುರುಷೋ-
ತ್ತಮನಡಿಗಾನೆರಗುವೆನು ೯

ಕಡೆವುದನುಳಿದು ಕಾದಿಹ ಬಿಡುಗಣ್ಣರ
ಗಡಣಂಗಳ ಕಡೆಗಣಿಸಿ
ಒಡನೆ ನಾರಾಯಣನುರವ ಸೇರಿದ ಸಿರಿ-
ಮಡದಿಯಡಿಗೆ ವಂದಿಪೆನು ೧೦

ಆವನಿಗಿಳೆಯುಮಾಗಸಮುಮಳತೆಗೊಳು-
ವಾ ವೇಳೆಯೊಳಡಿಗಳಿಗೆ
ಪಾವುಗೆಯಂತಳವಟ್ಟು ತೋರಿದುವಾ
ದೇವನಿಗಾನು ವಂದಿಪೆನು ೧೧

ಕಡಲೆಡೆಯೊಳು ಮಲಗಿದನಾವಳಿಗಾಗಿ
ಕಡಲ ಕಡೆದು ಬಳಲಿದನು
ಕಡಲೊಳು ದಾರಿಗೈದನು ಶೌರಿಯಾ ಸಿರಿ-
ಮಡದಿಯಡಿಗೆ ವಂದಿಪೆನು ೧೨

ವಂದಾರು ಜನಕೆ ವಾಂಛಿತಫಲಗಳನೀವ
ಮಂದಾರತರುಗೆ ಮಾಧವಗೆ
ಕುಂದುಗಳಿಲ್ಲದೆ ಗುಣಕರುಗೊಂಡ ಮು-
ಕುಂದನಿಗಾನು ವಂದಿಪೆನು ೧೩

ಪುರುಷೋತ್ತಮನೆದೆಯೊಳು ಪುದುಗಿರ್ದವ-
ನಿರವರಿತೆಲ್ಲ ಲೋಗರೊಳು
ಕರುಣಾಮೃತವ ಕರೆಗಣ್ಮಿಸಿ ಪರಿಸುವ
ಸಿರಿರಾಣಿಯಡಿಯ ಸೇವಿಪೆನು ೧೪

ಆವನಿಚ್ಛೆಯೊಳವತರಿಸಿದುದಾದಿಯೊ-
ಳಾವನಿಂದೊಳ್ಪುವಡೆದುದು
ಆವನೊಳಡಗುವುದಖಿಳ ಚರಾಚರ-
ವಾ ವಿಷ್ಣುಗಾನೆರಗುವೆನು ೧೫

ಶ್ರೀ ವಿಷ್ಣುವಲ್ಲಭೆಯೆನಿಸಿ ಸಕಲ ವೇ-
ದಾವಳಿಯೊಳು ಜಸವಡೆದ
ಪಾವನ ಚರಿತೆಯ ಪದ್ಮಸದ್ಮೆಯ ಲ-
ಕ್ಷ್ಮೀವನಿತೆಯ ವಂದಿಪೆನು ೧೬

ಆವನಾಣತಿಯೊಳಿಗ ಕರ್ಮಯೋಗ ಮ-
ತ್ತಾವನ ನೆನಹು ವಿಜ್ಞಾನ
ಆವನೊಳೆರಕ ಭಕುತಿಯಾ ಪರವಾಸು-
ದೇವನಿಗಾನೆರಗುವೆನು ೧೭

ಜ್ಞಾನ ವೈರಾಗ್ಯ ಶ್ರೀ ಹರಿಭಕ್ತಿ ಸತ್ಕರ್ಮ-
ಹೀನರನೆಮ್ಮನಾರೈದು
ಆ ನಾರಾಯಣನಡಿಗೆರಗಿಪ ಸಿರಿ-
ಗಾನತಿಗೈದು ಬಾಳುವೆನು ೧೮

# ಶ್ರೀ ಪಾರ್ವತೀಪರಮೇಶ್ವರರ ವಿವಾಹ

ಆಗಳ್ ಹೊಸಮದವಣಿಗನೆನಿಪ ಶ್ರೀ ಪಂಪಾವಿರೂಪಾಕ್ಷಂ ಸಮಯೋಚಿತಾಮೃತಾನ್ನಮನುಂಡು ಮಧುಪರ್ಕಮಂ ಕೈಕೊಂಡು—

ಇರೆ ಹರಿಯುಜರನುಮಿಸುತುಂ
ಪರಮ ಶುಭಾಕರ ಮುಹೂರ್ತಮೆಲೆಲೆ ಸಮೀಪಂ
ಕರುಣಿಪುದೆನೆ ಮಂಗಳ ವಾ-
ಗ್ವಿರಚನೆಯಂ ಕೇಳ್ದು ಭೋಂಕನೆಳ್ದಂ ರುದ್ರಂ ೧

ಅಂತೆಳ್ದು ನಡೆತಂದು ವಿವಾಹಗೇಹದೊಳಪೊಕ್ಕು—

ಮುತ್ತೈದೆಯರೊತ್ತೊತ್ತಿಯ-
ನೊತ್ತರಿಸುತೆ ಬೆಳಗಿನೊಳಗೆ ಹೊಸಬೆಳಗಂ ಸೂ-
ಸುತ್ತುಂ ಸವಿನೋಟಮನೀ-
ಯುತ್ತುಂ ಜವನಿಕೆಯ ನೆಲೆಗೆ ಶಿವನೆಯ್ತಂದಂ ೨

ಆ ಸಮಯದೊಳ್ ಪಾರ್ವತೀದೇವಿ ನಿಟ್ಟೈದೆಮೆಟ್ಟಕ್ಕಿಯಂ ಮೆಟ್ಟಿ ತೆರೆಯಂ ಮರೆಗೊಂಡು ನಿಂದಿರ್ಪಲ್ಲಿ—

ನಲ್ಲರ ನಡುವುಪಚಾರಂ
ಸಲ್ಲಲಿತೇಕ್ಷಣದ ನಡುವೆ ಪಕ್ಷ್ಮಪುಟಂ ಸಂ-
ಫುಲ್ಲರದಮಧ್ಯದೊಳ್ ಮಿಗೆ
ಸೊಲ್ಲಿರ್ಪಂತಿರ್ದುದಲ್ಲಿ ತೆರೆ ಹರನಿದಿರೊಳ್ ೩

ಅಂತಿರ್ಪ ಜವನಿಕೆಯನತಿಸ್ನೇಹದಿಂ ನೋಡಿ—

ಬೆಳಗಿನ ಬೀಜಾವಳಿಯೊ-
ಬ್ಬುಳಿಯೋ ನಕ್ಷತ್ರರಾಶಿಯೋ ನವಪುಣ್ಯಂ-
ಗಳ ಪುದುವೊ ಚಂದ್ರಿಕಾತಂ-
ಡುಲವೊ ಎನೆ ತೊಳಗಿ ತೋರ್ಪ ಮೆಟ್ಟಕ್ಕಿಗಳಂ ೪

ಕಾಂತಿಮಯಂ ಶಶಿಚೂಡಂ
ಶಾಂತಂ ನವಭೋಗಿಯೆನಿಪ ಲೀಲಾವಾಸಂ
ಸಂತಂ ಸುರುಚಿರ ಹರ್ಷಮ-
ಯಂ ತಡೆಯದೆ ಮೆಟ್ಟಿನಿಂದ ಸಮನಂತರದೊಳ್ ೫

ಹರಿಯುಂ ಸರಸಿಜಭವನುಂ
ಪುರುಹೂತನುಮೆಸೆವ ಋಷಿಗಳುಂ ಗಣಕುಲಮುಂ
ಗಿರಿಜೇಶನ ಗಿರಿಜೆಯ ಭಾ
ಸುರಪರಿಧಾನದ ಸಮೀಪದೊಳ್ ನಿಂದಾಗಳ್ ೬

ಕಳಕಳಮಂ ನಿವಾರಿಸುತುಮಾಯತಮೇಯೆನಲಾಯತಂ ಲಸ-
ದ್ಗಳಬಳಮಂ ವಿವರ್ಜಿಸುತುಮಾಯತಮೇಯೆನಲಾಯತಂ ನಿರಾ-
ಕುಳಿತಮನಂ ಬೃಹಸ್ಪತಿ ಸಮಾಯತಮೇಯೆನಲಾಯತಂ ಮನಂ-
ಗೊಳಿಪ ಮಹಾಮುಹೂರ್ತದೊಳಗಾಯತಮೇಯೆನೆ ತಪ್ಪದಾಯತಂ ೭

ಎಂಬ ಸಮಯದೊಳ್--

ಅಮರಗುರು ಸಕಳವೇದಾ-
ಗಮಕೋವಿದನೊಲ್ದು ಭಕ್ತಿಯಿಂದಂ ಪುಣ್ಯಾ-
ಹಮೆನುತ್ತುಮಿತ್ತ ರಾಜತ್
ಸುಮುಹೂರ್ತಂ ಬಂದು ತೆರೆಯನೋಸರಿಸಲೊಡಂ ೮

ಕರಡೆಗಳ ರವಂ ನಿಸ್ಸಾ-
ಳರವಂ ಭೇರೀರವಂ ಮೃದಂಗರವಂ ದೇ-
ವರ ಹೂಮಳೆಗಳ ಘೋರೆಂ
ಬ ರವಂ ಮಂಗಳರವಂಗಳುಣ್ಮಿದುವಾಗಳ್ ೯

ಆನಿರೆ ಮತ್ತೊರ್ವಳ್ ಗಡ
ತಾನಿರ್ಪಳ್ ಜಡೆಯೊಳೆನುತೆ ಮುಳಿದಿಡುವಂತಾ
ಮಾನಿನಿ ಜೀರಿಗೆ ಬೆಲ್ಲದೊ-
ಳಾನುತೆ ಶಿವನುತ್ತಮಾಂಗಮಂ ಪದೆದಿಟ್ಟಳ್ ೧೦

ಮೃಡನಾಗಳ್ ಗಿರಿಜೆಯ ಚೆ-
ಲ್ವಿಡಿದ ಮೊಗಂಗಂಡು ಸಾತ್ವಿಕಂ ಕೈಕೊಂಡೊ-
ಲ್ದಿಡುವಾ ಜೀರಿಗೆ ಬೆಲ್ಲಂ
ಸಡಿಲ್ದು ಕಂಪನದೆ ಬಿಳ್ದುವಗಜೆಯ ಪದದೊಳ್ ೧೧

ಅನಂತರದೊಳ್—

ಆರಸುತ್ತಿರೆ ಪಲಕಾಲದೊ-
ಳುರಿ ನಿನ್ನನೆನುತ್ತೆ ಶಿವನ ಮಕುಟೇಂದುಗೆ ತಾಂ
ತುರುಗಿದ ತಾರಗೆಯೆಂಬಾ
ತೆರದಿಂ ತಂಡುಲಮನಗಜೆ ಸುರಿದಳ್ ಶಿರದೊಳ್ ೧೨

ಆಗಳ್—

ಪರಮತಪೋನಿಧಿಯೆನಿಸಿದ
ಗಿರಿಜೆಗೆ ಪುಣ್ಯಾಂಬುವಿಂದಮಭಿಷೇಕಮನೊ-
ಪ್ಪಿರೆ ಮಾಡುವ ತೆರದಿಂ ಶಂ-
ಕರನಮಲಿನತಂಡುಲಂಗಳಂ ತವೆ ಸುರಿದಂ ೧೩

ಆ ಸಮಯದೊಳ್—

ನಲಿನಲಿದು ಬಂದು ಗಿರಿಪತಿ-
ಯೊಲವಿಂದಂ ಗಿರಿಜೆ ಸಹಿತವುಂ ನಾವೆಲ್ಲಂ
ನೆಲೆದೊಳ್ತಿರ್ ಬಳಿದೊಳ್ತಿರ್
ಸಲೆದೊಳ್ತಿರ್ ನಿಮಗೆನುತ್ತೆ ಧಾರೆಯನೆರೆದಂ ೧೪

ಗಿರಿಜಾತೆಯು ಸಕಲಗುಣಂ
ಹರ ನಿಮ್ಮಂ ಸುತ್ತುಗೀ ತೆರದೊಳೆಂಬಂತೊ-
ಪ್ಪಿರೆ ಸುತ್ತಿದರತಿವ್ಯುದುತರ
ಸುರುಚಿರನವಕಾಂತಿಯೆಸೆವ ಗುಣವುಂ ಗುಣವುಂ ೧೫

ಐದುಂವದನನ ಕಾಂತೆಯು-
ನ್ನೈದಿ ಪತಿವ್ರತೆಯುರಧಿಕತರವುದದಿಂ ಮು-
ತ್ತೈದೆಯೆ ನೆರೆಯೈದೆಯೆ ಸಲೆ
ಯೈದೆಯೆ ನಿಟ್ಟೈದೆಯೆಂದು ಪರಸುತ್ತಿರ್ದರ್ ೧೬

ಇಂತು ವಿವಾಹವಿಭ್ರಮವುಂ ಕೈಕೊಂಡು ಗಿರಿಜೆಯ ಕರತಳವುಂ ಪಿಡಿದು ಸೋಮಧರಂ ವ್ಯೋಮಶಿಖಂ ಹೋಮಸ್ಥಳಕ್ಕೆ ನಡೆತಂದಿಕ್ಕಿದ ಹಸೆಯ ಮೇಲೆ ಪಶುಪತಿ ಕುಳ್ಳಿರೆ ಮಂತ್ರ ತಂತ್ರ ಯಂತ್ರ ಸಿದ್ಧನಪ್ಪ ಪರಮೇಷ್ಠಿ ಹರನನುಜ್ಞೆಯಿಂ ಸ್ಥಂಡಿಲವುನಲಂಕರಿಸಿ ಮೆಲ್ಲಮೆಲ್ಲನುಲ್ಲೇಖನಂಗೆಯ್ದಗ್ನಿಯಂ ಪ್ರತಿಷ್ಠೆಯಂ ಮಾಡಿ ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರನುಮತದಿಂ ಪ್ರಾಣಾಯಾಮವುಂ ಮಂತ್ರಿಸಿ ಸಮಿತ್‌ಪರಿಸ್ತರಣಂ ಪಾತ್ರಾಸಾಧನಂ ಆಜ್ಯಸಂಸ್ಕಾರಂ ಸ್ರುಕ್‌ಸ್ರುವ ಸಮ್ಮಾರ್ಜನಂ ದೂರ್ವಾಯವಹಸ್ತಬಂಧನಾದಿ ಸತ್‌ಕ್ರಿಯೆಗಳಿಂ ಹೋಮವುಂ ಮಾಡುತ್ತಿರ್ದು—

ಭಾವಿಸಿ ಮಂತ್ರಾವಳಿಯಿಂ-
ದೋವುತೆ ಹುತವಹನೊಳೆಸೆವ ಲಾಜಾಹುತಿಯಂ
ತೀವಿದನಂತರಮುಗಸುತೆ
ದೇವನ ಬಲದಿಂದಮೊಡಕೆ ಬಂದಳನೂನಂ ೧೭

ಅಂತು ಬರೆ ಪೂರ್ಣಾಹುತಿಯಂ ಕೊಟ್ಟು ಹೋಮಸಮಾಪ್ತಿಯೊಳಾಪ್ತನಪ್ಪ ಕಮಳಜಂ ಸಪ್ತಪದಿಯಂ ಕಟ್ಟಳ್ಕರಿಂ ಮೆಟ್ಟಿಸೆ ತದನಂತರಂ ಶೈಲಜಾವರಂ ನಂದೀಶ್ವರ ವೀರಭದ್ರಾದಿ ಗಣಂಗಳುಂ ಹರಿವಿರಿಂಚಿಪುರಂದರಾದಿ ಸಮಸ್ತ ಸುರಸಮೂಹಮುಂ ಸಪಂಕ್ತಿಯೊಳ್ ಕುಳ್ಳಿರೆ ಪಾರ್ವತಿ

ಯೊಡನವ್ಯೃತಾನ್ನಮನಾರೋಗಿಸಿ ಕೈಘಟ್ಟಿಯುಂ ಕೊಂಡು ತಾಂಬೂಲ ಮನಾದರಿಸುತ್ತುಮಂತಿಂತು ಚತುರ್ಥಿಯುಂ ಕಳೆದು ಸಾಕಾರನಿಧಿಯೋ ಕುಳಿಯಾಡಿ ಗಿರಿರಾಜಂಗೆ ಕರುಣಿಸುತ್ತುಂ ಮೇನಾದೇವಿಯುಂ ಮನ್ನಿ ಸುತ್ತುಂ ಗಿರಿಜೆಯುನಾಲಿಂಗಿಸುತ್ತುಂ ವೃಷಭಸಮಾರೂಢಂ ಬಾಳೇಂದು ಮೌಳಿ ಕೈಲಾಸಾಭಿಮುಖನಾಗಿ ನಡೆತಂದು ಕೈಲಾಸದರಮನೆಯುನೊಳ ಪೊಕ್ಕುಬಂದಾಗಳ್—

ಆರತಿಯೆತ್ತೆ ರುದ್ರಗಣಿಕಾನಿಕರಂ ಸರಸೀಜನಾಭನುಂ<br>
ವಾರಿಜಪುತ್ರನುಂ ಪೊಗಳೆ ದೇವಗಣಾವಳಿಯುಳ್ಕರಿಂದೆ ಕೈ-<br>
ವಾರಿಸೆ ನಂದಿಯಿಂದಮಿಳಿದುನ್ನತಸನ್ನುತಸಿಂಹಪೀಠಮಂ<br>
ತಾರಗಿರೀಂದ್ರನಾಥನೊಸೆದೇರಿದನದ್ರಿಸುತಾಸಮನ್ವಿತಂ ೧೮

# ಶ್ರೀ ಸೀತಾರಾಮರ ವಿವಾಹ

ಆಗಳಾ ಪುಣ್ಯಾವಹ ಸಮಯದೊಳ್ ಜಾನಕೀದೇವಿ—

ಆವೆಡೆ ಹಂಸೆಗೀನಡೆಯ ಚೆಲ್ವಿನೆ ನೂಪುರದಿಂಚರಂ ಸ್ಮರಂ
ಜೇವೊಡೆದಂದವಾಗೆ ಮೃದುಪಾದತಳಂಗಳ ಕೆಂಪು ಕೂಡೆ ಕೆಂ-
ದಾವರೆವೂಗಳಂ ಕೆದರುವಂತಿರೆ ಕುಂತಳಸೌರಭಕ್ಕೆ ಭೃಂ-
ಗಾವಳಿ ಮೇಲೆ ಪೀಲಿದಳೆಯಂತಿರೆ ಬಂದಳದೊಂದು ಲೀಳೆಯಿಂ ೧

ಅಲರ್ಗಣೆಯನಂಗಜಂಗೀ-
ಯಲೆಂದು ರತಿ ಬರ್ಪ ಮಾಳ್ಕೆಯಿಂ ಮಾಲೆಯನಾ
ಲಲಿತಾಂಗಿ ಪಿಡಿದು ಕಣ್ಗಂ
ಕೆಲಕ್ಕಮಾ ದಾಶರಥಿಯ ಬಗೆಗಂ ಬಂದಳ್ ೨

ಅಂತು ಬಂದು—

ಮಾಲೆಯ ಮೇಲೆ ತುಂಬಿಗಳ ಮಾಲೆ ತೆರಂಬೊಳೆದಾಡೆ ಬೇರೆ ಪೂ
ಮಾಲೆಯ ಲೀಲೆಯಂ ಕೆದರೆ ಕೇಕರಮಾಲೆ ಶಿರೀಷಮಾಲೆಯಂ
ಸೋಲಿಸೆ ನೀಳ್ದ ಬಾಹುಲತೆ ತೋಳ ಮೊದಲ್ ಮದನಾನುರಾಗಮಂ
ಸಾಲಿಡೆ ಸಾರ್ದು ಸೀತೆ ರಘುವಂಶನವೋರುಗೆ ಮಾಲೆ ಸೂಡಿದಳ್ ೩

ತನಿಸೋಂಕಿಂ ಮೆಯ್ಗೆ ರೋಮಾಂಚಮನೊದವಿಸಿ
ರಾಮಂಗೆ ವೈದೇಹಿ ನೀರೇ-
ಜನಿಸರ್ಗಾಮೋದಗಂಧೋದಕಸವನಮನಿತ್ತಳ್ಕರಿಂ ಬಾಹುಮೂಲಂ
ಸ್ತನಮೂಲಂ ನಾಭಿಮೂಲಂ ತ್ರಿಗುಣಿಸೆ ಸುಮನಶ್ಶೇಖರಂ ಮಾಡಿ ಕಂದ-
ರ್ಪನ ವಾಮೋಪಾಂತದೊಳ್ ರಂಜಿಸುವ ರತಿಯ
ಸೌಂದರ್ಯಮಂ ಸೂರೆಗೊಂಡಳ್ ೪

ಅನಂತರಂ ಸಕಲಮಂಗಲದ್ರವ್ಯಸಂಸೇವ್ಯಮಾನಮಣಿವೇದಿಕಾಮಧ್ಯ ವಿಶಾಲಕಲಧೌತಪೀಠದೊಳ್ ರತಿಯುಂ ರತಿಪತಿಯುಮಿರ್ಪವೋಲ್

ದಂಪತಿಗಳಿರ್ದರ್ ಆ ಸಮಯದೊಳ್ ಜನಕನಭಿಜನ ಸನಾಭಿಜನ ಸಮನ್ವಿತಂ ಗಣಕಗಣಪುನಃಪುನರುಚ್ಚರಿತಪುಣ್ಯಾಹಪ್ರಶಸ್ತರವದೊಡನೆ ಅಗಣ್ಯಪುಣ್ಯಾಪುಣ್ಯಾಂಗನಾಜನದಾಶೀರ್ವಾದನಾದವೊದವೆಯುಂ ಮಾಂಗಲ್ಯಗೀತಮಧುರಧ್ವನಿಗಳೊಡನೆ ಮಂಗಳಪಾಠಕಪಠನಧ್ವನಿಗಳುಣ್ಮಿಪೊಣ್ಮಿಯುಂ ರಘುಕುಲರಾಜಭವನಕಲಶೋದ್ಧರಣಮೆನಿಸಿ ಶುಚಿಸುರಭಿಸಲಿಲಪೂರ್ಣಸುವರ್ಣಕಲಶಮನೆತ್ತಿ—

ಜಗತೀಜಂಗಮಕಲ್ಪವೃಕ್ಷಮಿದೆ ಕೈವಂದತ್ತೆನಲ್ ಬಾಹುಶಾ-
ಖೆಗಳೊಳ್ ಪೊಂಗಳಸಂ ಮನಂಗೊಳಿಸೆ ಭೂಪಂ ತನ್ನ ಸಂತಾನವೃ-
ದ್ಧಿಗೆ ಪೊಯ್ನೀರೆರೆವಂತೆ ಹರ್ಷಪುಲಕಂ ಕೈಗಣ್ಮೆ ಹರ್ಷಾಶ್ರು ಕೈ-
ಮಿಗೆ ಕೈನೀರೆರೆದಂ ಪಳಂಚೆ ದೆಸೆಯಂ ಮಾಂಗಲ್ಯತೂರ್ಯಸ್ವನಂ ೫

ಅಂತು ಪಾಣಿಗ್ರಹಣಂಗೆಯಿಸುವುದುಂ—

ತೆಂಕಣ ಗಾಳಿಯು ಸೋಂಕಿನೊ-
ಳಂಕುರಿಸಿದ ಚೂತಲತೆಯುವೋಲ್ ಕೆಂದಳಮಂ
ಸೋಂಕೆ ಬಲಕರತಳಂ ಪುಳ-
ಕಾಂಕುರಮೊದವಿದುವು ಜಾನಕಿಯ ತನುಲತೆಯೊಳ್ ೬

ಅಪಮಾನಿಸಿದಂ ಬಾಲಾ-
ತಪಮೊಳಸಿದ ಪುಂಡರೀಕಷಂಡದ ಸೊಬಗಂ
ಚಪಲಾಕ್ಷಿಯ ಕೋಮಳ ಪಾ-
ಣಿಪಲ್ಲವಸ್ಪರ್ಶಹರ್ಷದಿಂ ರಘುರಾಮಂ ೭

ಅತಿಲಲಿತಾಕೃತಿಯಂ ದಂ-
ಪತಿಯಂ ನೋಡಿದುದು ಪುರಜನಂ ನೋಡುವವೋಲ್
ಶತಮುಖನಂ ಶಚಿಯಂ ರತಿ
ಪತಿಯಂ ರತಿಯಂ ಹಿಮಾಂಶುವಂ ರೋಹಿಣಿಯಂ ೮

# ಶ್ರೀಕೃಷ್ಣರುಕ್ಮಿಣಿಯರ ವಿವಾಹ

ಆಗಳೊಂದು ಶೃಂಗಾರವೇಶ್ಮದೊಳ್ ಭೀಷ್ಮಕಸುತೆಯನಲಂಕರಿಪ ಲೆಂದು ನೆರೆದನೇಕವಿಧದ ವನಿತೆಯರಾಕೆಯ ಸೌಕುಮಾರ್ಯಮಂ ನಿರೀಕ್ಷಿಸಿ—

ವಿಳಸಿತಮಪ್ಪದೊಂದು ಪೊಳೆಪಂ ತಳೆದಿರ್ದುದನಿಂದುಲೇಖೆಯುಂ
ಪೊಳೆಪಿಡವೇಳ್ಪದೇ ಸಹಜಸೌಂದರರೂಪೆಯನೀಮೃಣಾಳ ಕೋ-
ಮಳೆಯನದೇನಲಂಕರಿಸವೇಳ್ಪದೆ ಮಂಗಳವರ್ಧನಾರ್ಥಮೀ
ಲಳನೆಯನಿಂದಲಂಕರಿಸುವಂ ವಿವಿಧಾಭರಣಪ್ರತಾನದಿಂ ೧

ಎಂದು ನುಡಿದು ಅಂತೆ ಕೈಗೆಯ್ಸಿ ರುಕ್ಮಿಣಿಯಂ ಪರಿಣಯನ ಭವನದೊಳ್ ಯಥೋಚಿತಾಚಾರದಿಂದಿರಿಸಿ—

ಕೋಮಳ ಮಾತುಳಂಗಫಳದಿಂ ಬಲಗೈ ಕಳಮಾಕ್ಷತಾರ್ದ್ರಪೂ-
ರ್ಣಾಮಳ ಶಂಖದಿಂದಮೆಡಗೆಯ್ಯೆಸೆಯುತ್ತಿರೆ ಬಂದನುತ್ಕಟ-
ಪ್ರೇಮನುದಾತ್ತವೇದಮತಿ ಕೃಷ್ಣಸಭಾವಳಯಕ್ಕೆ ವಿಶ್ವವಿ-
ದ್ಯಾಮಹಿತಂ ದ್ವಿಜೌಘಸಹಿತಂ ಯದುವಂಶಹಿತಂ ಪುರೋಹಿತಂ ೨

ಅಂತು ಬಂದು ಪುರೋಹಿತನುಚ್ಚಾರಿತ ಸ್ವಸ್ತಿಶಬ್ದನಾಗಿ ಮಾತು ಳಂಗಫಲಮಂ ನೀಡಿ ವಿವಾಹಲಗ್ನಮಾಸನ್ನಮೆಂದು ಬಿನ್ನಪಂಗೆಯ್ವುದು-ಮಂಬುರುಹನಾಭಂ ಸಂಭ್ರಮದಿಂ ಪರಿಣಯನಭವನಾಭಿಮುಖನಾಗಿ—

ಬಳವದಪಾರವೇದರುತಿ ಗೇಯರವಂ ಪಟಹಸ್ವನಂ ಪುರೀ-
ಕಳಕಳದಿಂ ದಳಂಬಡೆದು ವಿಶ್ವಜಗಜ್ಜನಕೀರ್ತನಾರವಂ-
ಗಳನಿನಿಸೇಳ್ಗೆವೆತ್ತು ದಿಗಿಭವ್ರಜಬೃಂಹಿತಭೂರಿನಾದದಿಂ
ಜಳನಿಧಿಯನಾಂತು ಘೂರ್ಣಿಪಿನಮಾಗೃಹಮಂ ಪುಗುತಂದನಚ್ಯುತಂ ೩

ಅಂತು ವಿವಾಹಮಂಟಪಮಂ ಪುಂಡರೀಕಾಕ್ಷಂ ಪುಗುವುದುಂ ಮಹೋತ್ಸಾಹಪರಂಪರೆ ನೆಗಳೆ ತದನಂತರಂ—

ತೊಲಗೆ ದುಕೂಲಕಾಂಡಪಟಮುತ್ತಮಲಗ್ನದೊಳೊರ್ವರೊರ್ವರಂ
ನಲಿದೊಲವಿಂದೆ ದಂಪತಿಗಳೀಕ್ಷಿಸೆ ನೋಟದ ಬಳ್ಳಿವಳ್ಳಿ ನೆ-
ಯ್ದಿಲ ಮಳೆಯೊಳ್ ಸುಧಾರಸದ ಸೋನೆಯೊಳಂಗಜಬಾಣವೃಷ್ಟಿಯೊಳ್
ಸಲೆ ನಿಲೆ ಪರ್ವಿ ಕೊರ್ವಿದುದು ಕೂಡೆ ವಿವಾಹಗೃಹಾಂತರಾಳದೊಳ್ ೪

ಅಲ್ಲಿಂಬಳಿಯಂ—

ಮೃದುಗತಿವಿಲೋಲಹಾರರ್
ಪ್ರದಕ್ಷಿಣಂಬಂದು ದಕ್ಷಿಣಾವರ್ತಶಿಖಾ-
ಸ್ಪದನಂ ಹೋಮಾನಳನಂ
ಮದುವಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್ ೫

ಅಂತು ವಿವಾಹಮಂಗಳಂ ಪರಿಪೂರ್ಣಮಾಗೆ ಚತುರ್ಥ ಮಹೋ-
ತ್ಸವಾನಂತರಮಂದಿನಿರುಳೊಳ್—

ಬೆರಲೊಳ್ ಮುದ್ರಿಕೆಯಂ ತೊಡರ್ಚುವ ಕಪೋಲಸ್ಥಾನದೊಳ್ ಪತ್ರವ-
ಲ್ಲರಿಯಂ ಚಿತ್ರಿಪ ಹಾರಮಂ ಪಿಡಿದು ನೋಳ್ಪಾಸ್ಯಾಂಬುಜಸ್ವೇದಮಂ
ಕರದಿಂದಂ ತೊಡೆವೊಯ್ಯನುಳ್ಳುಡೆಗೆ ಕಾಂಚೀದಾಮಮಂ ಸಾರ್ಚುವೊ-
ಳ್ಗುರುಳಂ ನೇರ್ಪಡೆ ತಿರ್ದುವೀ ನೆವದೆ ಕೃಷ್ಣಂ ನಲ್ಲಳಂ ಪೊರ್ದಿದಂ ೬

ಒಲವಿಂನೋಡುವನೋಟದಿಂಪದೆದು ಸೋಂಕುತ್ತಿರ್ಪ ಸೋಂಕಿಂಮನಂ
ಗೆಲೆ ಮಾತಾಡುವ ಮಾತಿನಿಂ ಕಳೆದು ಲಜ್ಜಾಸಾಧ್ವಸೋದ್ರೇಕಮಂ
ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯಂ ಮಾಡಲ್ ಬಳಿಕ್ಕಂ ಕಳಾ-
ನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗಪ್ರಪಂಚಂಗಳಂ ೭

ಅನುದಿನಮಿಂತು ಕಾಮಸುಖದಿಂದನುರಾಗಮನಿತ್ತು ರುಕ್ಮಿಣೀ-
ವನಿತೆಗೆ ರಕ್ಷಣಕ್ಷಮತೆಯಿಂದತಿಹರ್ಷಮನುಂಟುಮಾಡಿ ಮೇ-
ದಿನಿಗೆ ಮಹತ್ತ್ವದಿಂ ಜಸಮನಾಗಿಸಿ ಯಾದವಸಂಕುಳಕ್ಕೆ ಪೆಂ-

# ಸುಭದ್ರಾರ್ಜುನರ ವಿವಾಹ

ಆಗಳ್ ಪಚ್ಚೆಯ ನೆಲಗಟ್ಟಿನೊಳಂ ರಾಜಾವರ್ತದ ಕಂಬದೊಳಂ ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಮಿಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ಚಂದ್ರಕಾಂತದ ಚಂದ್ರಶಾಲೆಯೊಳಮೊಪ್ಪುವ ವಿವಾಹಗೇಹಮಂ ಸಮೆಯಿಸಿಯುದರ ನಡುವಣಾದ್ರ್ರವೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ ಚೆಂಬೊನ್ನ ಪಟ್ಟವಣೆಯ ಮೇಗಣ ದುಗುಲದ ಪಸೆಯೊಳ್ ಗುಣಾರ್ಣವನನಾ ಸುಭದ್ರೆಯೊಡನೆ ಕುಳ್ಳಿರಿಸಿ ಹಿತಪುರೋಹಿತಪ್ರಾಜ್ಯಾಜ್ಯಾಹುತಿಹುತಹುತವಹಸಮಕ್ಷದೊಳ್—

ಪಸುರ್ವಂದರ್ ಪಸೆ ವೇದಪಾರಗರವಂ ಕಣ್ಬೇಟದುದ್ದಾನಿಯಂ
ಪಸರಂಗೆಯ್ದುವೊಲಪ್ಪ ಪೊಚ್ಚರ ಮಹಾಸಾಮಂತ ಸೀಮಂತಿನೀ
ಪ್ರಸರಂ ಮಂಗಳತೂರ್ಯನಾದಮೆಸೆಯುತ್ತಿರ್ಪನ್ನೆಗಂ ಚಕ್ರಿ ರಾ-
ಗಿಸಿ ಕೆಯ್ನೀರೆರೆದಂ ಗುಣಾರ್ಣವಮಹೀಪಾಲಂಗವಾ ಕನ್ನೆಗಂ ೧

ಅಂತು ಕೆಯ್ನೀರೆರೆದು ಪಾಣಿಗ್ರಹಣಂಗೆಯ್ಸೆ —

ಇಡಿದಿರೆ ಮಂಜಿನೊಳ್ಸುರುಗಿ ತೆಂಕಣಗಾಳಿಯೊಳಾದಸೋಂಕಿನೊಳ್
ನಡುಗುವಶೋಕವಲ್ಲರಿಯ ಪಲ್ಲವದೊಳ್ ನವಚೂತಪಲ್ಲವಂ
ತೊಡರ್ದವೊಲಾಗೆ ಘರ್ಮಜಲದಿಂ ನಡುಪಾಕೆಯ ಪಾಣಿಪಲ್ಲವಂ-
ಬಿಡಿದು ಬೆಡಂಗನಾಳ್ದುದು ಗುಣಾರ್ಣವನೊಪ್ಪುವ ಪಾಣಿಪಲ್ಲವಂ ೨

ಅಂತೊರ್ವರೊರ್ವರ ಕಿರುಕುಣಿಕೆಗಳಂ ಪಿಡಿದು ರತಿಯುಂ ಕಾಮದೇವನುಂಬರ್ಪಂತೆ ಬೇಳ್ವೆಯ ಕೊಂಡದ ಮೊದಲ್ಗೆವಂದಾ ದಂಪತಿಗಳ್ ಸಪ್ತಾರ್ಚಿಯಂ ಮೂರುಂ ಸೂಳ್ ಬಲವಂದು ನಿಂದಿಂಬಳಿಯಮಾಕೆ ಪುರೋಹಿತನ ಪೇಳ್ದ ಪೂಜೆಯೊಳ್ ಲಾಜೆಯನಗ್ನಿಕುಂಡದೊಳ್ ಸುರಿದು-

ಆದರ ಪೊದಳ್ದು ನೀಳ್ದ ಪೊಗೆಯಂ ಲುಳಿತಾಳಕೆ ತನ್ನ ವಕ್ತ್ರಪ-
ದ್ಮದಿನೊಸೆದಾಂತೊಡಾಕೆಯ ಕಪೋಲದೊಳಾ ನವಧೂಮಲೇಖೆ ಬೆ-
ಳ್ಪಿದಿಗೊರ್ಳೆ ಗಾಡಿವೆತ್ತಡರ್ದ ಕತ್ತುರಿಯೊಳ್ ಮದವಟ್ಟೆಯಂ ವಿಳಾ-
ಸದೆ ತೆಗೆದಂತೆ ಕಣ್ಗೆಸೆದು ತೋರಿದುದಾ ಕದನತ್ರಿಣೇತ್ರನಾ ೩

ಅಂತು ಸೊಗಯಿಸೆ ಪಾಡುವ ಮಂಗಳರವಂಗಳುಮೋದುವ ಋಚೆ
ಗಳುಂ ಪರಸುವ ಪರಕೆಗಳುಮೊಸೆಯೆ ಪಸೆಯೊಳಿರ್ದ—

ಪರಿಜೆಯನಂಟು ಕೆನ್ನೆಗಳನೊಯ್ಯನೆ ನೀವುವ ಚಿನ್ನಪೂವನೋ-
ಸರಿಸುವ ಹಾರಮಂ ಪಿಡಿದು ನೋಡುವ ಕಟ್ಟಿದ ನೂಲಕೊಂಗಲಂ
ತಿರಿಪುವ ಕೆಯ್ತದೊಂದು ನೆವದಿಂ ಲಲಿತಾಂಗಿಯ ಶಂಕೆಯಂ ಭಯಂ
ಬೆರಸಿದ ನಾಣುಮಂ ಕ್ರಮದೆ ಪಿಂಗಿಸು ಬೇಸರದಿರ್ ಗುಣಾರ್ಣವಾ ೪

ಎಂದು ಕೆಲದೊಳಿರ್ದ ದಂಡುರುಂಬೆಗಳ್ ಬುದ್ಧಿವೇಳೆ ಅಂತೊ
ಪ್ಪುವ ವಿವಾಹಮಂಗಳದೊಸಗೆಯೊಳ್ ಮಂಗಳಪಾಠಕರೆಳ್ದು ನಿಂದಿರ್ದು—

ಇಂದ್ರಾನೋಕಹಮೊಪ್ಪುವಿಂದ್ರತುರಗಂ ಸಂದಿಂದ್ರಗೇಹಂ ಪೊದ-
ಳ್ದಿಂದ್ರಾನೇಕಪಮೊಪ್ಪುವಿಂದ್ರನಖಿಳೇಂದ್ರೈಶ್ವರ್ಯಮಿಂದ್ರಾಣಿ ಸಂ-
ದಿಂದ್ರಾನರ್ಘ್ಯವಿಭೂಷಣಂಗಳರಿಭೂಪಾಳಾವಳೀ ದುಸ್ತಮ-
ಶ್ಚಂದ್ರಂಗೀಗರಿಗಂಗೆ ಮಂಗಳಮಹಾಶ್ರೀಯಂ ಜಯಶ್ರೀಯುಮಂ ೫

ಎಂದು ಮಂಗಳವೃತ್ತಂಗಳನೋದೆ—

ತೊಟ್ಟ ತುಡುಗೆಗಳ್ ಕೌಸ್ತುಭರತ್ನಮನೋರೊಂದೆ
ಮಸುಳಿಸೆ ಪಾಲ್ಗಡಲೊಳ್
ಪುಟ್ಟಿದಾನೆಯನಾನೆಗಳ್ ಗೆಲೆವರೆ ಕುದುರೆಗಳ್
ಕುದುರೆಯಂ ಕೀಳ್ಮಾಡೆ
ತೊಟ್ಟ ಮದನನ ಪೂಗಣೆಗೆಣೆಯಾಗೆ ಗಣಿಕೆಯರ್
ಗಣಿದಮಂ ಬಗೆಯದಿಂತು
ಕೊಟ್ಟಂ ತಂಗಿಗೆ ಬಳಿವಳಿಯೆಂದಿಂತು ಸರ್ವಸ್ವಮೆಲ್ಲಮಂ
ಪುರುಷೋತ್ತಮಂ ೬

# ಶ್ರೀಮತಿ ವಜ್ರಜಂಘರ ವಿವಾಹ

ಅಂತು ನೆರೆಯೆ ಕೈಗೆಯ್ದು ವಧೂವರರಿರ್ವರುಮಂ ಮೌಹೂರ್ತಿಕ ಗಣನಿರೂಪಿತಪ್ರಶಸ್ತಮುಹೂರ್ತದೊಳ್ ಅತಿಪ್ರಮೋದನಿರ್ಭರಪ್ರಣಯ ಪ್ರಹತಮಂಗಳಪಟಹರವಂಗಳುಂ ಅತಿಮಧುರಮಂದ್ರಮನೋಹರ ಮಂಗಳಗೀತಾರವಂಗಳುಂ ಅಲಕ್ತಕದ್ರವಾರುಣಚರಣರಣಿತನೂಪುರಮುಖರಿತ ದಿಗಂತರಾಂತಃಪುರಜನಾಶೀರ್ವಾದಕೋಳಾಹಳಮುಮೆಸೆಯೆ ಮುಂದಿಟ್ಟು ತಂದು ವಿವಾಹಮಂಟಪದ ನಡುವಣ ಮಣಿಮಯವೇದಿಕೆಯ ಹಾಟಕ ಪೀಠದ ಮೇಲೆ ಪಾಸಿದ ದುಗುಲದ ದಳಿಂಬದೊಳ್ ಇರಿಸಿದಾಗಳ್ ಸಕಳಚಕ್ರವರ್ತಿ—

ನೆರೆದತ್ತೆತ್ತಾನುಮೀ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕ-
ಣ್ದೆರೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನುತುಂ ರಾಗಮಂ ಬೀರಲಾದ-
ಳ್ಕರ ಪೆಂಪಂ ತೋರಲಾಗಳ್ ಕನಕಕಳಶಮಂ ತಾನೆ ಬಂದೆತ್ತಿ ಕೈನೀ-
ರೆರೆದಂ ಶ್ರೀ ವಜ್ರದಂತಕ್ಷಿತಿಪತಿ ಸತತೋತ್ಸಾಹಸಂದೋಹದಿಂದಂ ೧

ಅಂತು ಕೈನೀರೆರೆದು ಪಾಣಿಗ್ರಹಂಗೆಯಿಸಿದಾಗಳ್ ವಜ್ರಜಂಘಂ ಶ್ರೀಮತಿಯ ನಿಕಾಮಕೋಮಳ ಕರತಳಪಲ್ಲವಸ್ಪರ್ಶನ ಸುಖೋನ್ಮೀಳಿತ-ಲೋಚನನಾಗೆ—

ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಳ್ದ ನಾಣ ಪೆಂ-
ಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬೆ-
ಚ್ಚನೆ ಬಸಿವಿಂದುಕಾಂತಕರಸಂಕುಳಮೊಯ್ಯನಮುಂಕಿ ಸೋಂಕೆ ಸೋಂ-
ಕಿನೊಳೊರೆವಿಂದುಕಾಂತಮಣಿಪುತ್ರಿಕೆಯಂದದಿನೊಪ್ಪಿ ತೋರಿದಳ್ ೨

ಆ ಪ್ರಸ್ತಾವದೊಳ್—

ಪರಿವ ಕಟಾಕ್ಷಂಗಳನೋ-
ಸರಿಸುತ್ತುಂ ನಿಮಿರ್ವ ಸುಯ್ಗಳಿಂ ಕುಸಿಯುತ್ತುಂ
ಶರಪಾಶಂಗಳ ನಡುವಣ
ಹರಿಣಿಯವೋಲ್ ಮನದೊಳಾಗಳಾಕುಳೆಯಾದಳ್ ೩

ಆಗಳ್ ವಜ್ರಜಂಘಂ—

ಪುಳಕಪ್ರೋದ್ಭೇದಘರ್ಮೋದಕವಿಸರಮನೊತ್ತಂಬದಿಂ ತಾಗೆಯುಂ ನಿ-
ಶ್ಚಳಧೈರ್ಯವ್ಯಾಜಶಿಯರ್ಗ್ಗಳನತರಳಿತಂ ದೃಷ್ಟಿ ಪೇಳ್ದತ್ತು ನಿರ್ವ್ಯಾ-
ಕುಳಮಾಗಳ್ ರಾಜಪುತ್ರಸ್ಮಿತಮಧುಮಧುರಾಪಾಂಗಜೈತ್ರಾಂಗಜಾಸ್ತ್ರಂ-
ಗಳ ಕೋಳಂ ನೂತನಪ್ರೇಮದೆ ನಿಮಿರ್ವೆಡೆಯೊಳ್ ದೃಷ್ಟಿಯುಂ
ಕಾವನಾವಂ ೪

ಅಂತಭಿನವಶಂಗಸಮುತ್ಪನ್ನ ಸಾಧ್ವಸರಸರಮಣೀಯತರ ಮುಗ್ಧ ವಧೂವದನವಿಲೋಕನಸುಖಮನನುಭವಿಸಿ—

ಇನಿವಿರಿದೊಂದು ಮೇಳಮುಮೊಡಂಬಡುವಳ್ಕರುಮೆನ್ನ ನಿನ್ನ ಮು-
ನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದೀಭವದಿಂದಮಾದ ವಾ-
ಸನೆ ಮರುಮೆಯ್ಗ್ಗಮಕ್ಕುಮದರಿಂದೆನಗಂ ನಿನಗಂ ಸಮಂತು ಮು-
ನ್ನಿನ ಭವಮೀಭವಂ ಮರುಭವಂ ಸಫಲಂ ಮೃಗಲೋಲಲೋಚನೇ ೫

ಎಂದು ಕೆಚ್ಚುವಿರ್ದ ಮಚ್ಚುಮನ್ ಉರ್ಚಿಪೋದ ಮೇಳಮುಮನ್ ಆಳವಿಗಳಿದಲಂಪುಮಂ ಬಳವಿವಡೆದಳ್ಕರುಮನ್ ಓರೊರ್ವರೊಳ್ ನೆರೆದನೇಕವಿಧಸುಖಸುಧಾರಸಾಧೀನಚಿತ್ತರಾಗಿರ್ದು—

ದಿವಿಜೇಂದ್ರಾವಾಸಸೌಖ್ಯಕ್ಕತಿಶಯಮೆಸೆವೀ ಸೌಖ್ಯಮಾದೇವಿಗಂ ರೂ-
ಪವಿಳಾಸಶ್ರೀಯೊಳೀದೇವಿಯೆ ಮಿಗಿಲಮರಾಕಾರಮಂ ಗೆಲ್ದದೀಮಾ-
ನವದೇಹಾಕಾರಮೆಂಬಂತಿರೆ ಭುವನಜನಂ ಶ್ರೀಮತೀವಕ್ತ್ರಚಂದ್ರ-
ಚ್ಛವಿ ಚೆಲ್ವಂ ಮಾಳ್ಪಿನಂ ಭೋಗಿಸಿದನಖಿಳಭೋಗಂಗಳಂ ವಜ್ರಜಂಘಂ ೬

# ಭರತ ಸುಭದ್ರಾದೇವಿಯರ ವಿವಾಹ

ಮುತ್ತಿನ ಮೆಟ್ಟಕ್ಕಿಯೊಳು ಕನ್ನೆ ನಿಂದಳು
ಮುತ್ತಿನ ತೆರೆಯ ಮರೆಯೊಳು
ಮತ್ತಕಾಶಿನಿಯರು ಹಾಡುತಿರ್ದರು ಸ್ವರ-
ವೆತ್ತಿ ಶೋಭನಧವಳಗಳಾ ೧

ಮೆಟ್ಟಕ್ಕಿಯೊಳು ನಿಂದು ನಲ್ಲನೆದೆಗೆ ಜುಮ್ಮ-
ದಟ್ಟಿಸಿ ಬರಿಸಿದಳೆನಲು
ಕೊಟ್ಟನೆ ಭರತೇಶ ಬರುತಿರ್ದನಿದೆ ಲಗ್ನ
ಮುಟ್ಟಲಾಯ್ತೆನೆ ಕೇಳುತೊಡನೆ ೨

ಬಲಗೈಯೊಳಾಂತ ಹೊನ್ನೊರೆಯ ಕರಾರಿ ಜ-
ಕ್ಕಲಿಸುವ ದೇವಶೃಂಗಾರಾ
ತೊಳಪ ಹಾವುಗೆಮೆಟ್ಟಿ ಚವರಸೀಗುರಿಗಳ
ಬಲುಮೋಡಿಯೊಳು ಬರುತಿರ್ದಾ ೩

ತೆರೆಯ ಮರೆಯೊಳಿರ್ದ ನಲ್ಲಳ ನೋಡುವಾ-
ತುರದೊಳುದ್ಧವನೇರುವಂತೆ
ಬರುತ ಮೆಟ್ಟಕ್ಕಿಯ ಮೆಟ್ಟನಿಂದನು ಶುಭ-
ಕರ ಜಯ ಜಯವೆಂಬ ರವದಿ ೪

ಓದಿದರೊಡನೆ ಭೂಸುರರು ಸಿದ್ಧಾಂತ ಸಂ-
ಪಾದಿತಮಂಗಲಾಷ್ಟಕವಾ
ಆದಿಚಕ್ರಿಗೆ ಸುಭದ್ರಾದೇವಿಗಧಿಕ ಲೀ-
ಲೋದಯ ದೊರೆಕೊಳ್ಳಲೆಂದು ೫

ನುತಮಂಗಲಾಷ್ಟಕಗಳನೋದುತಿಡೆಯೊಳಾ-
ಯುತವೆಯೆಂದುರೆ ಕೇಳ್ವರದಕೆ
ಹಿತವರಾಯುತವೆನೆ ಸನ್ನದ್ಧರಾಗಿಯೆಂ-
ಬತುಳವಾಕ್ಯಗಳು ಮೇರೆದುವು ೬

ಪರಮಮಂತ್ರವನೋದಿ ಮುತ್ತಿನಕ್ಷತೆಗಳ
ಹರಸಿ ದಂಪತಿಗಳಿಗಿಡುತ
ತಿರುಗಿ ಮತ್ತಾಯುತವೆಯೆಂಬರದಕೆ ಚೆ-
ಚ್ಚರದೊಳಾಯುತವೆಂಬರೊಸೆದು ೭

ಸುಲಲಿತ ಮಂಗಲಾಷ್ಟಕಪೂರ್ಣವಾಗಿ ಮಂ-
ಗಲದ ಕೌಶಿಕೆಯ ರಾಗದೊಳು
ಪಳಮಂಜರಿಯೊಳು ಪಾಡಿದೊಡೆ ವಾದ್ಯದ ತೆರೆ
ತೊಲಗಿತು ಜಯಜಯವೆನಲು ೮

ಪ್ರಮದೆಯ ಕೈಗೆ ಪೂಮಾಲೆಕೊಟ್ಟದ ನಿನ್ನ
ರಮಣಗೆ ಸೂಡಕ್ಕಯೆಂದು
ನಮಿರಾಜ ಸಿಂಧುಗಂಗಾದೇವಿ ವಿನಮಿಗ-
ಳಮಳ ಸಂಭ್ರಮದೊಳಾಡಿದರು ೯

ನಾಣಿಂದ ತಲೆಗುಸಿದವಳ ಕೈಗಳ ಮಧು-
ವಾಣಿ ಮತ್ತೆತ್ತಿ ಸೂಚಿಸಲು
ಪ್ರಾಣಕಾಂತಗೆ ಮಾಲೆಯಿಟ್ಟಳು ಧವಳ ಕ-
ಲ್ಯಾಣ ಶೋಭನದ ಘೋಷದೊಳು ೧೦

ನಿನ್ನಿಂದ ನನಗೆ ನನ್ನಿಂದ ನಿನಗೆ ತಾಪ
ಮುನ್ನುಕ್ಕಿ ಹೊಯ್ಮಾಲೆಯಾಯ್ತು
ಇನ್ನಿಲ್ಲ ಹೊಯ್ಮಾಲೆ ಹೂಮಾಲೆಯಾಯ್ತೆಂಬ-
ಗನ್ನದೊಳ್ಮಾಲೆಯಿಕ್ಕಿದಳು ೧೧

ತೋಳಮೊದಲು ತಳತಳಿಸಲೆರಡು ದುಂಡು
ದೋಳೆತ್ತಿ ಕೊರಳಿಗಾ ನೀರೆ
ಮಾಲೆಯನಿಡುವಾಗ ತ್ರಿಜಗದ ಭಾಗ್ಯ ಬಂ-
ದೋಲೈಸಿದಂತಾಯ್ತು ನೃಪಗೆ ೧೨

ನೆಗಹಿ ಮಾಲೆಯನಿಕ್ಕುವಾಗ ಗಂಡನ ಮುದ್ದು-
ಮೊಗಗಾಣುತೆದೆ ಜುಮ್ಮಾದಟ್ಟೆ
ನಗುತ ಲಜ್ಜೆಯೊಳಾಕೆ ತಲೆಗುಸಿದಳು ರಾಯ
ನಗುತಿರ್ದನೊಪ್ಪಚ್ಚಿ ಮನುಗೆ ೧೩

ಮತ್ತೆ ತಂಗಿಯ ಕೈಯ ನಾಲ್ವರು ಸೋದರ-
ರೆತ್ತಿ ಚಕ್ರೇಶನ ಕೈಗೆ
ಹತ್ತಿಸಿದರು ಸಕಲೇಂದ್ರಿಯಸುಖದ ಸಂ-
ಪತ್ತ ಕೈಸಾರ್ಚುವಂದದೊಳು ೧೪

ಕರತಳ ಸೋಂಕಲೊಬ್ಬೊಬ್ಬರ ಮೆಯ್ಯೊಳಂ-
ಕುರಿಸುತಿರ್ದುವು ಪುಳಕಗಳು
ಪರಿರಂಭದೊಳಗಿನ್ನು ಸರ್ವಾಂಗ ಸೋಂಕಿದಾ-
ಗರರೆ ವಿಲಾಸವಿನ್ನೆಂತೊ ೧೫

ಬಿನ್ನಾಣದಿಂದ ತಂದೆಳೆಯ ಲತೆಯನು ಬಾ-
ವನ್ನ ವೃಕ್ಷಕೆ ಹಬ್ಬಲಿತ್ತು
ಪನ್ನೀರನೆರೆವಂತೆ ನಮಿರಾಜನೆರೆದನು
ಹೊನ್ನ ಗಿಂಡಿಯಲಿ ಧಾರೆಯನು ೧

ಅಂಗಜಾಗಮಸಿದ್ಧಿರಸ್ತು ಲೀಲಾಸ್ತು ಸು-
ಸಂಗೋಸ್ತು ಜಯಯೆಂಬ ರವದಿ
ತಂಗಾಳಿ ಪೂಗಂಪ ಪಿಡಿವಂತೆ ರಾಯ ತ-
ನ್ನಂಗನೆಯಂಗುಲಿವಿಡಿದಾ ೧೭

ನಲ್ಲಳ ಕೈವಿಡಿದಲ್ಲಿಂದ ನಡೆದೊತ್ತಿ-
ನಲ್ಲಿ ಧೂಮವ ಕಳೆದುರಿವ
ಉಲ್ಲಾಸ ಹೋಮಕುಂಡವ ಬಲವಂದನು
ಮೆಲ್ಲನೋಜೆಯೊಳು ಗಾಡಿಯೊಳು ೧೮

ಇನಿಯಳ ಕೈವಿಡಿದಿನಬಿಂಬದೊತ್ತಿನೊಳ್
ಬಿನದಕಾಡುವ ಕಾಮನಂತೆ
ಅನಲಕುಂಡವ ಸುತ್ತಿ ಬಂದನು ತನ್ನ ಮಾ-
ನಿನಿಯ ಹಸ್ತಾಂಗುಲಿವಿಡಿದು ೧೯

ಅಳಿಯನೊಡನೆ ಪೋಪ ಮಗಳ ಗಾಡಿಯನು ಪೆಂ-
ಗಳ ಮರೆಯೊಳು ನಿಂದು ನೋಡಿ
ಪುಳಕವಾಂತಾನಂದರಸದೊಳೋಲಾಡಿದ-
ಳೆಳಸಿ ಯಶೋಭದ್ರಾದೇವಿ ೨೦

# ರತಿ ಮನ್ಮಥರ ಮನೆವಾರ್ತೆ

ಅಂತು ಕರುಮಾಡದ ಮುಂದಣ ಓಲಗಸಾಲೆಯೊಳ್ ಸಿಂಗ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲ ಕುಳ್ಳಿರಲೊಡನೆ—

ನಿಗಳದ ನುಣ್ಬರಂ ನೆಗೆವಿನಂ ನುಡಿಗಳ್ ಕಿವಿಗಿಂಪನೀವಿನಂ
ಮಗಮಗಿಪುತ್ತುಮಿರ್ಪ ನರುಮಯ್ಗಲರ್ವಕ್ಕಿ ಜಿನುಂಗುತಿರ್ಪಿನಂ
ಬಗೆಗೊಳೆ ಬಂದು ನಿಂದು ನೆರೆದಗ್ಗದ ನೀರೆಯರೊಲ್ದು ಪರ್ವುವಾ
ಪೊಗಳುರಿ ಪೊಸ್ಕ್ರ ಬಿತ್ತರದೆ ಮುತ್ತಿನ ಸೇಸೆಯನಾಗಳಿಕ್ಕಿದರ್

ನೊಸಲೆಡೆಯಲ್ಲಿ ನೀಳ್ದ ಕುರುಳೋಳಿಗಳುಯ್ಯಲನಾಡೆ ಡಾಳಮಂ
ಪಸರಿಪ ತೋರಮುತ್ತಿನ ಸರಂ ಮೊಲೆಯೊಳ್ ತಲೆಯೊತ್ತೆ ನಾಡೆಯುಂ
ಮಿಸುಗುವ ಕಣ್ಣನುಣ್ಬೆಳಗು ಜೊನ್ನದೊಳೋರಗೆಯಾಗೆ ಸೊಂಪು ಸಂ
ದಿಸೆ ಪೊಳರನ್ನದಾರತಿಯನೆತ್ತಿದರಗ್ಗದ ಗಾಡಿಕಾರ್ತಿಯರ್

ಬಿಳಿಯ ನನೆಯ ಕಣೆಗೆ ನಾಡೆ
ಪಗೆವರೊಡಲ ಸುಗಿಯ ಕೂಡೆ ।
ನೆಲನನೊಂದೆ ಕೊಡೆಯನಾಳ್ದ
ಮಿಸುಪ ಜಸಮೆ ನಿಮಿರೆ ಕೇಳ್ದ ॥ ೧ ॥

ಕುಳಿರ್ವ ಪೂಗೊಳಂಗಳಲ್ಲಿ
ತಳಿರ ಕಾವಣಂಗಳಲ್ಲಿ ।
ಪಳಿಕುವೆಸದ ಬೆಟ್ಟದಲ್ಲಿ
ಪರಿವ ತೊರೆಯ ತಡಿಗಳಲ್ಲಿ ॥ ೨ ॥

ತುಂಬಿವಿಂಡಿನಂತೆ ಪಾಡಿ
ಜಕ್ಕವಕ್ಕಿಯಂತೆ ಕೂಡಿ ।
ದೆಸೆಯನಿಚ್ಚೆಯಿಂದೆ ನೋಡಿ
ಸೊಗಯಿಪಂಚೆಯಂತಿರಾಡಿ ॥ ೩ ॥

ಪೂಳೆವ ತಳಿರ ನನೆಯ ಮೊನೆಯ
ತುರುಗಿದಲರ ಬಳಸುವೆಲರ ।
ಮಿಳಿರ್ವ ಮಿಡಿಯ ಗಿಳಿಯ ನುಡಿಯ
ಪರಿವ ಕಾಲ ಕರ್ವುಗೋಲ ॥ ೬ ॥

ಚೆಲ್ವನಾಂತು ತೋರ್ಪ ಬನದ
ನಡುವೆ ತನ್ನದೊಂದು ಬಿನದ- ।
ಮಮರೆ ಮಿರುಪ ಬಟ್ಟವೊಲೆಯ
ಸೊಬಗು ರೂಡಿವಡೆದ ನೆಲೆಯ ॥ ೭ ॥

ಚೆನ್ನೆಯರ್ಕಳೊಡನೆ ಕೂಡಿ
ಮುಗುಳಸರಮನಡರೆ ಸೂಡಿ ।
ನಲ್ಲರೊಡನೆ ಕೂರ್ಮೆಯಿಂದೆ
ಕಾವನೊಡನೆ ಪೆರ್ಮೆಯಿಂದೆ ॥ ೮ ॥

ಮಾವಿನಡಿಯೊಳಾಡುತುಂ
ಪಾಡನೆಯ್ದೆ ಕೇಳುತುಂ ।
ಪೊತ್ತನಿಂತು ಕಳೆಯುತುಂ
ಕೊಲಗದಿರ್ದರೆಸೆಯುತುಂ ॥ ೯ ॥

ಇಂತು ರತಿಯುಂ ಕಾಮದೇವನುಂ ರೂಡಿವೆತ್ತ ಗಾಡಿಯಿಂದೊಪ್ಪಿರ್ಪರ್—

# ಸೋಬಾನೆ

ಹೆಣ್ಣಿನಿಂದಲೆ ಇಹವು ಹೆಣ್ಣಿನಿಂದಲೆ ಪರವು
ಹೆಣ್ಣಿಂದೆ ಸಕಲ ಸಂಪದವು—ಹೆಣ್ಣೊಲ್ಲ
ದಣ್ಣಗಳು ಯಾರು—ಸರ್ವಜ್ಞ? ೧

ಮಗಳಕ್ಕ ತಂಗಿಯು ಮಿಗೆ ಸೊಸೆಯು ನಾದಿನಿ
ಜಗದ ವನಿತೆಯರು ಜನನಿಯು—ಇವರೊಳಗೆ
ಜಗಕೊಬ್ಬುಳ್ಳೈಸೆ—ಸರ್ವಜ್ಞ. ೨

ಮನಬಂದ ಹೆಣ್ಣನ್ನು ವಿನಯದಲಿ ಕರೆದಿತ್ತು
ಮನಮುಟ್ಟಿ ಬಾಳ್ವೆಮಾಡಿದರೆ—ಅಮೃತದ
ಕೆನೆಯ ಸವಿದಂತೆ—ಸರ್ವಜ್ಞ ೩

ಬೆಚ್ಚನ್ನ ಮನೆಯಾಗಿ ವೆಚ್ಚಕ್ಕೆ ಹೊನ್ನಾಗಿ
ಇಚ್ಛೆಯನು ಅರಿವ ಸತಿಯಾಗಿ—ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ—ಸರ್ವಜ್ಞ. ೪

ಹಳ್ಳಗದ್ದೆಗಳಾಗಿ ಮುಂದರಿವ ಮಗನಾಗಿ
ಒಳ್ಳೆ ಗುಣದವಳು ಸೊಸೆಯಾದರಾ ಮನೆಗೆ
ಬಳ್ಳದಲಿ ಹೊನ್ನು—ಸರ್ವಜ್ಞ. ೫

## ಪರಿಶಿಷ್ಟ

# ಹೆಣ್ಣಿನ ಹಿರಿಮೆ

ಪೆಣ್ಣು ಪೆತ್ತವರ ಬಳಗ ಬಳಿವುದು ಬೇಗ
ಪೆಣ್ಣು ಪೆತ್ತವರು ಪೆರ್ಚುವರು
ಪೆಣ್ಣು ಪೆತ್ತುದರಿಂದೆ ಪೆಸರೆನಿಸಿತು ಏಗೆ
ಬಣ್ಣವೇರಿತು ಪಾಲ್ಗಡಲು ೧

ಪೆಣ್ಣಿಂದ ಪೆರ್ಮೆಗೊಂಡನು ಹಿಮವಂತನು
ಪೆಣ್ಣಿಂದ ಭೃಗು ಪೆರ್ಚಿದನು
ಪೆಣ್ಣಿಂದ ಜನಕರಾಯನು ಜಸವಡೆದನು
ಪೆಣ್ಣ ನಿಂದಿಸಲೇಕೆ ಪೆರರು ೨

ಸಿರಿರಾಣಿಯು ಸೀತೆಯು ರುಕ್ಮಿಣಿಯು ಶ್ರೀ-
ಹರಿಯೊಡನೊಂದೆ ಹಂತಿಯೊಳು
ಇರಿಸಿ ಪೂಜೆಯನೊಡರಿಸುವರು ಪಿರಿಯರು
ಪರಿಕಿಪೊಡವರು ಪೆಣ್ಣೈಸೆ ೩

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು ೪

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರಿರ್ವರೊಳೇಳ್ಗೆವಡೆದವರಿಂದ
ಸವನಿಪುದಿಹಪರಸೌಖ್ಯ ೫

ಕುಲಪುತ್ರನೋದಿ ತಿಳಿದು ನಡೆದಲ್ಲದೆ
ಕುಲವನುದ್ಧರಿಸಲರಿಯನು
ಕುಲಪುತ್ರಿಯೋಗ್ಯವರನಿಗಿತ್ತ ಮಾತ್ರಕೆ
ಕುಲಕೋಟಿಯನುದ್ಧರಿಪಳು ೬

ಬಸುರೊಳೊಗೆದು ಬಳಿದೇಕ ರೀತಿಯೊಳಿಲ್ಲ
ಸಿಸುಗಳಿರ್ದೊಡಮೇನು ಬಳಿಕ
ಒಸೆದಿತ್ತುದನೊಡಬಡುವಳು ಪೆಣ್ ಗಂಡು
ಪಸುಗೆಗೊಂಬನು ಬಲ್ಕೆಯೊಳು ೭

ಅರಿತು ನಿಟ್ಟಿಸೆ ಗಂಡುಮಕ್ಕಳಿಂದತಿಶಯ-
ದೆರಕದೊಳೆಸೆವ ಪೆಣ್ಗಳನು
ಪೊರನೋಟದಿಂದ ನೋಡದೆ ಪೋಲಿಸಿಸದೆ
ಮರುಕವೆರಸಿ ಮನ್ನಿಪುದು ೮

ಎನ್ನ ಪೆತ್ತವರಿವರೀ ಮನೆಯೊಡವೆಗ-
ಳೆನ್ನವೆಂದೆರವಿಲ್ಲದಿರ್ಪ
ಕನ್ನೆಯನನ್ಯರಿಗೀವನ್ನೆವರಮಾರಿ
ಮನ್ನಿಸುವುದು ಮಮತೆಯೊಳು ೯

ಪದುಳಗೊಳಿಸಿ ಪಲಬಗೆ ಪಸದನಗಳ
ಪುದುಗಿಸಿ ಪೊಂದೊಡಿಗೆಗಳ
ಮದುವೆಗೆ ನೆರೆದ ಪೆಣ್ಮಕ್ಕಳ ನಿಟ್ಟಸ-
ರಿದೆಗೊಳಿಪಂತೆಸಗುವುದು ೧೦

ಸುಗುಣನಾವನು ಸುಚರಿತ್ರನಾವನು ಕಣ್ಗೆ
ಸೊಗಸುವ ಸೊಬಗನಾರೆಂದು
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ-
ಳೊಗೆದೊಳ್ಗವರನಿಗೊಲಿದು ೧೧

ಅಲಿಗೆಯ್ಯದವಮತಿಯೆಸಗದ ವೈರವ
ಬಲಿಸದ ಬರಿದೆ ಪಳಿಯದ
ಕೊಲೆ ಬೈಗಳಿಂದ ಕೋಟಲೆಗೊಳಿಸದ ಸ-
ತ್ಕುಲಕೀವುದು ಕುವರಿಯನು ೧೨

ಜಡನಿಗೆ ಜಾತಿಹೀನನಿಗೆ ಚಂಚಲನಿಗೆ
ಕಡುಮೂರ್ಖನಿಗೆ ಗಾಂಪನಿಗೆ
ಬಡತನದೊಳು ಬಲು ಬವಣೆಗೊಂಬವನಿಗೆ
ಕೊಡಲಾಗದು ಕುವರಿಯನು ೧೩

ಕುವರಿಯನಿಂತು ಕೂರ್ಮೆಯೊಳು ಸಲಹಿ ಮು-
ತ್ತವಳನಿತ್ತೊಳ್ಗವರನಿಗೆ
ಸವೆಯದ ಧರ್ಮವ ಸಂಪಾದಿಸಿ ಮಾ-
ಧವನ ಮನವ ಬರಿಸುವುದು ೧೪

# ಹೆಣ್ಣನ್ನು ಕೇಳುವುದು

— ೧ —

ಶ್ರೀ ಕೈಲಾಸದೊಳಿರ್ದು ಪಿ-
ನಾಕಿ ವಿವಾಹಾರ್ಥದಿಂದೆ ವರಮೂರ್ತಿಗಳಂ
ಲೋಕೋತ್ತಮರಂ ಪುಣ್ಯ-
ಶ್ಲೋಕರನಾ ಸಪ್ತಋಷಿಯರಂ ನೆನೆಯಲೊಡಂ

ನೆನೆಯದ ಮುನ್ನಂ ಬಂದರ್
ವಿನುತಾಶೇಷರ್ ಜಟಾಧರರ್ ಭಸಿತಾಂಗರ್
ಘನಮಹಿಮಾರುಂಧತಿ ಬೆ-
ನ್ನನೆ ಬರೆವರೆ ಸಪ್ತಋಷಿಯರತಿಮುದದಿಂದಂ

ಬಂದಭವಂಗತಿಸುಖಮುಖ-
ದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತುಂ
ಸಂದಣಿಸಿ ಪುಳಕಮೊಕ್ಕರೆ
ನಿಂದಿರ್ದು ಶಶಾಂಕಮೌಳಿ ಬೆಸಸೆನೆ ಮತ್ತಂ

ಇರೆ ಕಂಡು ಕರುಣದಿಂ ಶಂ-
ಕರನಾ ರುಷಿಗಳ್ಗೆ ಬೆಸಸಿದಂ ಪೋಪುದು ಭೂ-
ಧರನಾಥನಲ್ಲಿಗತ್ಯಾ-
ದರಮಂ ಮಾಡುವುದು ಬೇಡುವುದು ಗಿರಿಸುತೆಯಂ

ಎಂದೊಡೆ ಹಸಾದಮೆಂದಾ-
ನಂದಂ ಮಿಗೆ ಸಪ್ತಋಷಿಗಳನುನಯದಿಂದೆ-
ಯ್ತಂದರ್ ಮಂಡಿತ ಪುಷ್ಪಕ
ವೃಂದಾರೂಢರ್ ನಗೇಶಪುರಮಂ ಪೊಕ್ಕರ್

ಆ ಸಮಯದೊಳ್—

ಮನದೊಳ್ ಪರಮೋತ್ಸಾಹಂ
ಜನಿಯಿಸಿ ಗಿರಿರಾಜನೆಸೆವ ಋಷಿಗಳನಿದಿರ್ಗೊಂ-
ಡನುನಯದಿಂ ತಂದುಚ್ಚಾ-
ಸನದೊಳ್ ಕುಳ್ಳಿರಿಸಿ ವಿನಯವಿಸವಿತನಾದಂ ೬

ಅಂತು ವಿನಯದಿಂ ಪೆರಗಿ—

ಸುರಲೋಕದಲ್ಲಿ ಸುಖದಿಂ-
ದಿರುತುಂ ಬರವೆಂತು ನಿಮಗೆ ದೊರೆಕೊಂಡುದಿದೆ-
ಮ್ಮುರುತರಭಾಗ್ಯಮೆನುತ್ತುಂ
ಗಿರಿರಾಜಂ ಸಪ್ತಋಷಿಗಳಂ ಕೇಳಲೊಡಂ ೭

ವರಮುನಿಗಳ್ ಮನದೊಂದಾ-
ದರದಿಂ ನುಡಿದರ್ ಶಿವಂ ಶಶಾಂಕಧರಂ ಶಂ-
ಕರನಭವಂ ನಿರ್ಮಾಯಂ
ಗಿರಿಜೆಯ ಬೇಡುವೊಡೆ ತಿಳುಪಿ ಕಳುಪಿದನೆಮ್ಮಂ ೮

ಆತಂಗೆ ಚಂದ್ರವರೌಳಿಗ-
ಜಾತಂಗೆ ನಿರಾಮಯಂಗೆ ನಿತ್ಯಂಗೆ ನತ-
ವ್ರಾತಂಗೆ ಬೇಡೆ ಬಂದೆವು
ನೂತನಭುವನೈಕಭಾಗ್ಯವತಿ ಪಾರ್ವತಿಯಂ ೯

ಚಂದ್ರಧರಂಗೆ ನತೋತ್ಪಲ-
ಚಂದ್ರಂಗಂ ಗಣಸಮೂಹನಯನಚಕೋರಸು-
ಚಂದ್ರಂಗಂ ಮುದದಿಂದಂ
ಚಂದ್ರಾನನೆ ಶಿವೆಯನೊಲ್ದು ಕೊಡು ಗಿರಿರಾಜಾ ೧೦

ಎಂದು ಸಪ್ತಋಷಿಗಳ್ ನುಡಿದಾಪ್ತವಚನಮಂ ಕರ್ಣರಸಾಯ
ಮಾಗೆ ಗಿರಿರಾಜಂ ಕೇಳ್ದು ಅಳವಿಗಳಿದ ಸಂತಸಮಂ ಸಂತೈಸಲಾರ
ಹೆಚ್ಚಿ ಹಿಗ್ಗಿ ಶರ್ವಂಗೆ ಪಾರ್ವತಿಯೆರವೆ ಪನ್ನಗಾಭರಣನೆನ್ನಂ ಬೇಡಲ್ವೆ
ಳ್ಪದೆ ಸರುಚಿಯಿಂ ಸಾಂಗೀಕಾರದಿಂ ಕಾಮದಿಂ ಪ್ರೇಮದಿಂ ನಿಷ್ಠೆಯಿ
ನೆಟ್ಟನೆ ಕೊಟ್ಟೆಂ ಕೊಟ್ಟೆನೆರಡಿಲ್ಲೆಂದು ಸತ್ಯವಚನಮಂ ಸಂತೋಷದಿ
ನುಡಿದು ಸಪ್ತಋಷಿಗಳ ಚರಣಕ್ಕೆ ಮತ್ತೆಮತ್ತೆರಗುತ್ತೆ ಅವರಂ ಹರಿಸದಿ
ಕಳುಹಿ, ಗಿರಿರಾಜಂ ಮಹೋತ್ಸಾಹದಿಂ ಮಹಾವಿವಾಹಮಂಟಪಾ
ಸಮಸ್ತವಸ್ತುಗಳಂ ವಿಸ್ತರಿಸುತ್ತಿರ್ದಂ.

— ೨ —

ವಜ್ರದಂತ ಚಕ್ರವರ್ತಿ ವಜ್ರಬಾಹುನೃಪನಂ ನಿನಗಾವುದು ಮನೋ
ರಥಮದಂ ಬೇಡಿಕೊಳ್ಳೆನೆ—

ಎನಗರಿದುಂಟೆ ನಿಮ್ಮ ದಯೆಯಿಂದುಳಿದಾವುದುಮೆಲ್ಲಮುಂಟು ನೀ-
ನೆನಗೆ ನರೇಂದ್ರಮೌಳಿಮಣಿರಾಜಿವಿರಾಜಿತಪಾದಪೀಠ ನೆ-
ಟ್ಟನೆ ದಯೆಗೆಯ್ವೊಡೀ ನಿಜತನೂಜೆಯನುತ್ಸವಮಂಗಳಾನಕ-
ಧ್ವನಿ ದೆಸೆಯಂ ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್ ೧೮

ಎಂಬುದುಂ ಚಕ್ರಧರನಧರಕಿಸಲಯದ ಮೇಲೆ ದಂತಕಾಂ
ಲತಾಂತ ಪ್ರಭೆಗಳ್ ಪಸರಿಸೆ—

ಒಡೆಯಂ ಕೂಸಿಂಗದೊಂದೇ ಕುಲದ ಚಲದ ಪೆಂಪೊಂದೆ
ಚೆಲ್ವೊಂದೆ ಸಂದೊ-
ಳ್ನುಡಿಯೊಂದೇ ವಿದ್ಯೆಯೊಂದೇ ಪುದಿದೊದವಿದ ಜನ್ಮಾಂತರ-
ಸ್ನೇಹವೊಂದೇ
ನುಡಿಯಲ್ಪಿಕ್ಕಲ್ಕದೊಂದಲ್ತೆನಲೆಡೆ ಪೆರರ್ಗಿನ್ನಿಲ್ಲ ಮುನ್ನಾ ವಿಧಾತ್ರಂ
ಕುಡಲಿರ್ದಂ ಕನ್ನೆಯಂ ಪೇಳ್ ನಿನಗಮೆನಗಮೇದಂದುಗಂ
ವಜ್ರಬಾಹೂ ೧೯

ಅಂತುಮಲ್ಲದೆಯುಂ--

ಬಾಲಸಹಕಾರತರು ನವ-
ಮಾಲತಿಗತಿಲಲಿತಪೂಗಭೂಜಾತಂ ತಾಂ-
ಬೂಲಲತೆಗೆಂಬವೊಲ್ ಸಮ-
ಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ ೧೩

ಸ್ತ್ರೀರತ್ನಮೀಗಳೀಕೆಯ
ಧಾರಿಣಿಯೊಳ್ ಪುರುಷರತ್ನಮೀತನೆ ಸದೃಶಾ-
ಕಾರರನಿವರಂ ಕೂಡಿ ಪ-
ಯೋರುಹಜಂಗಕ್ಕೆ ಸಮಸಮಾಯೋಗಯಶಂ ೧೪

ಎಂಬುದುಂ ವಜ್ರಬಾಹು ವಜ್ರದಂತಸೂಕ್ತಾಮೃತಸಿಕ್ತಮಪ್ಪ ನಿಜ ಮನೋರಥಾಮರದ್ರುಮದಿನೊಗೆದಂಕುರಿಸಿದಂಕುರನಿಕರಮನನುಕರಿಸುವ ರೋಮಾಂಚನಿಚಯದಿಂ ನಿಚಿತಾಂಗನಾಗಿ—

ಪ್ರಣಯಮಿದನನ್ಯಸಾಧಾ-
ರಣಮೆನಿಪ ಭವತ್ಪ್ರಸಾದಮೆಂಬಮೃತದಿನಾಂ
ತಣಿದೆಂ ಭೂಭುವನದೊಳಾ-
ರೆಣೆಯೆನಗೆಂಬೊಂದು ಸಂತಸಕ್ಕೆಡೆಯಾದಂ ೧೫

# ವಿವಾಹ ಮಂಟಪ-ಮಂಗಲದ್ರವ್ಯ-ವರ್ಣನ

ಒದವಿದ ಚೆಲ್ವು ನೂರ್ಮಡಿಸೆ ನೂರ್ಮಡಿಕುಂ ಹರಿದಶ್ಮಭಿತ್ತಿಜಾ-
ಳದ ಪಸುರಿಂದೆ ಜಾಗದ ಪಸುರ್ಪುಸಹಾರಮನೋಹರಪ್ರಸೂ-
ನದ ಕಡುವೆಳ್ಪಿನಿಂದೆ ಕಡೆಯಿಕ್ಕಿದ ಮುತ್ತಿನ ಬೆಳ್ಪು ರತ್ನದೀ-
ಪದ ಬೆಳಗಿಂದೆ ಮಾಣಿಕದ ಕಂಬದ ಕೆಂಬೆಳಗಾನಿವಾಸದೊಳ್ ೧

ಮಿಸುಗುವ ಚೌಕದ ಮುತ್ತಿನ
ಪಸೆವಾಸಿನ ಪಟ್ಟವಳಿಯ ಮಗುಳದ ರುಚಿಗಳ್
ಪಸರಿಸೆ ಪೊಂಜಗಲಿ ವಿರಾ-
ಜಿಸುತಿರ್ದುದು ಗಾಂಗತುಂಗಪುಳಿನಶ್ರೀವೋಲ್ ೨

ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಶೇಷಾಕ್ಷತಂ
ಬಿಸಸೂತ್ರಂ ಸಿತದೂರ್ವೆ ನೂತನಯುವಗ್ರೈವೇಯಕಂ ತನ್ನೊಳೊ-
ಪ್ಪೆ ಸಮುಸ್ತೌಷಧಿ ಪಂಚರತ್ನಸಹಿತಂ ಪೂತಾಂಬುಪೂರ್ಣಂ ವಿರಾ-
ಜಿಸಿದತ್ತುಂಚಿತಶಾತಕುಂಭಮಯ ಕುಂಭಂ ವೇದಿಕಾಮಧ್ಯದೊಳ್ ೩

ಸಾರಸುವರ್ಣವೇದಿಕೆ ದುಕೂಲವಿತಾನಮಪೂರ್ವಭೃಂಗಿ ಭೃಂ-
ಗಾರ ಘಟಾಳಿ ಪೂರ್ಣಕಲಶಂ ಮಣಿದೀಪಿಕೆ ಪಲ್ಲವೋಲ್ಲಸ-
ತ್ತೋರಣಮುನ್ನತಧ್ವಜನಿನಿಪ್ಪುವು ಮಂಗಳಲಕ್ಷ್ಮಿ ತೊಟ್ಟಲಂ-
ಕಾರನಿಕಾಯಮೆಂತಿರೆ ಮನೋಹರಮಾಯ್ತು ವಿವಾಹಮಂಟಪಂ ೪

ಜವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥಮಾರ್ದ್ರಾಕ್ಷತಂ
ಧವಳಾಬ್ಜಂ ಸಿತದೂರ್ವೆ ನೂತನಫಲಂ ಗೋರೋಚನಂ ಲಾಜೆ ಬ
ಣ್ಣವುರಂ ರನ್ನದ ತಣ್ಣೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂ-
ಬಿವರಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದಾ ಸದ್ಮದೊಳ್ ೫

# ವರನ ಮಂಗಳಾಚಾರ

— ೧ —

ಆ ಮಹೋತ್ಸವದೊಳ್ ವನಮಾಲಿ ಮಜ್ಜನಶಾಲೆಗೆ ಬಿಜಯಂಗೆಯ್ದು ಮಜ್ಜನಪೀಠಮನಲಂಕರಿಸಿದಾಗಳ್—

ಉಗುರ್ಗೊನೆಸೋಂಕದಂತುಗುರಿಪ್ಪೋಜೆ ತರಂತರದಿಂ ಶಿರೋಜಮಂ
ನೆಗಪುವ ಭಂಗಿ ಬಿತ್ತರದಿನೆತ್ತುವ ಕೆಂದಳದೊಂದು ಲಾಘವಂ
ಸೊಗಯಿಸುತಿರ್ಪಿನಂ ಸಹಜದಿವ್ಯಸುಗಂಧದ ಕೇಶಪಾಶಮಂ
ಮೃಗಮದಗಂಧಿ ಪೂಸಿದಳುಪಾಸಿತಚಂಪಕಗಂಧತೈಲಮಂ ೧

ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ ಕಣ್ಬೆಳ್ಪಮು
ಲ್ಲಾಗೆ ಪೊನ್ನೋಲೆ ಕದಂಪನಪ್ಪಳಿಸೆ ಮಧ್ಯಂ ಬಳ್ಕೆ ಘರ್ಮಾಂಬು ಕೈ-
ಮಿಗೆ ಕಣ್ಗೊಂಡು ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂ-
ಬುಗಿಸಿತ್ತಂದು ಸುಹೃಜ್ಜನಂ ವಿರಚಿಪನ್ನಂ ಮಂಗಳಾಚಾರಮಂ ೨

ಅನಂತರಂ ನೈಪಥ್ಯನಿಳಯಕ್ಕೆವಂದಲ್ಲಿ—

ಮನಮನಲರ್ಚುತಿರ್ಪ ನವಪುಷ್ಪಸಮೃದ್ಧಿ ವಸಂತ ಚೂತನಂ-
ದನಮಲರ್ವಂತು ಮಾಂಗಳಿಕಸಾರಧನಂ ಧವಳಪ್ರಸಾಧನಂ
ತನಗಮರ್ದೊಪ್ಪೆ ತದ್ವಿಮಲಮೌಕ್ತಿಕಮಂಡನಕಾಂತಿಪೂರದಿಂ
ನೆನೆಯಿಸಿದಂ ಮುಕುಂದನಮೃತಾಬ್ಧಿಯೊಳಿರ್ಪ ನಿಜಾದಿಮೂರ್ತಿಯಂ ೩

— ೨ —

ಆಗಳ್ ಪಂಚರತ್ನಗರ್ಭವಿವಿಧೌಷಧಿಸಂದರ್ಭಶಾತಕುಂಭಕುಂಭಸಂಭೃತಮಂಗಳಜಳಂಗಳಿಂದಂ ಮಿಸಿಸೆ ಮಿಂದಳಂಕಾರಮಂದಿರಕ್ಕೆ ವಂದು ನೆರೆಯೆ ಕೈಗೆಯ್ಯೆ—

ಕರಿವೆರಸಿದ ಪೊಸದುಗುಲದ
ತೆರಳ್ಕೆವೆತ್ತುಡೆ ಹಟಿತ್ಕಟೀಸೂತ್ರಪರಿ-
ಸ್ಫುರಿತದೊಳಂ ಕಟ್ಟಿದ ಪೊಂ-
ಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ ೪

ತರಳತರವೃತ್ತಮೌಕ್ತಿಕ-
ಪರಿಕರಮೇಕಾಂತಕಾಂತಮೆಕ್ಕಾವಳಿ ಕಂ-
ಧರದೊಳಮರ್ದಿಸೆಯೆ ಪೋಲ್ತುದು
ಪರಿವೇಷಂಗೊಂಡ ಚಂದ್ರನಂ ಮುಖಚಂದ್ರಂ ೫

ಹಿಮವದ್ಗಿರಿಕಟಕದಿನೊಗೆ-
ವಮರಸರಿತ್ಸ್ರೋತಮೆಂಬ ಮಾತಂ ಪಡೆದೇಂ
ಹಿಮಗೌರಹಾರಮೆಸೆದುದೊ
ಹಿಮಶೈಲಶಿಲಾವಿಶಾಲವಕ್ಷಸ್ಸ್ಥಳದೊಳ್ ೬

ಶ್ರೀಮತಿಯ ಮನಮನೆರಗಿಸ-
ಲೀ ಮಣಿಮಯಮಕುಟಮಾಗಳುಂ ಸಾಲ್ವುದೆ ತ-
ತ್ಸ್ತೋಮಳೆ ಮುಳಿದಿರೆ ತಿಳಿಪ-
ಲ್ಕೀಮಕುಟಮೆ ಸಾಲ್ಗುಮೆನಿಸಲಾರ್ತುದು ಮಕುಟಂ ೭

ಕೇಯೂರಕಟಕಸಮಿತಿ ಯು-
ಗಾಯತಬಾಹುಗಳಿನುನ್ಮಿಷದ್ರತ್ನಹಟ-
ಚ್ಛಾಯೆಯೊಳೆ ಮುಸುಕಿ ದೇಹ-
ಚ್ಛಾಯೆಯುಮಂ ಪುದಿಯೆ ರತ್ನತರುವನೆ ಪೋಲ್ತಂ ೮

ಮನಸಿಜನಂಗನಾಜನವಶೀಕರಣೌಷಧಮಂಗಜನ್ಮನಂ-
ಬಿನ ಮದಶಕ್ತಿ ಮನ್ಮಥನ ಮೋಹನಯಂತ್ರಮಿದಪ್ಪುದಲ್ಲದಂ-
ದಿನಿತುವರಂ ಮನಂಗೊಳಿಸದೆಂಬಿನಮುಜ್ಜ್ವಳಮಂಗಳ ಪ್ರಸಾ-
ಧನಮೆ ಮನೋಜರಾಜಜಯಸಾಧನಮಾದುದು ವಜ್ರಜಂಘನಾ ೯

# ವಧುವಿನ ಮಂಗಳಾಲಂಕಾರ

— ೧ —

ಅನ್ನೆಗಮಿತ್ತಲ್—

ಮಳಯಜ ಮಿಶ್ರ ತೀರ್ಥಜಲಧಾರೆಗಳಿಂ ಶಶಿಕಾಂತಮಂ-
ಗಳಕಲಶಾಂಶುಧಾರೆಗಳಿನಿರ್ಮಡಿಸಿತ್ತು ವಿವಾಹಮುಖ್ಯಮಂ-
ಗಳ ಸವನಂ ವಿಳಾಸವತಿ ಸೀತೆಗೆ ದಿಕ್ತಟಮಂ ಪಳಂಚೆ ಮಂ-
ಗಳ ಪಟಹಸ್ವನಂ ಪುದಿಯೆ ಮಂಗಳಗಾಯಕ ಗೀತ ನಿಸ್ವನಂ ೧

ಹಿಮಕಿರಣಮಾಲಿ ಮುಸುಕಿದ
ಕುಮುದಿನಿಯ ಬೆಡಂಗು ತನಗೆ ಪುದುವೆನೆ ಮೃಗನೇ-
ತ್ರೆ ಮನಂಗೊಂಡಳ್ ಮಲಯಜ
ಹಿಮ ಕರ್ದಮ ಕಲಿಲ ಸಲಿಲ ಸವನೋತ್ಸವದೊಳ್ ೨

ಆ ಮಂಗಲಸವನಸಮಯಾನಂತರಂ ಜಾನಕಿ ನೀರಾಜನವಿರಾಜಮಾನೆ ಧಾರಾನಿಳಯಜಲಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣಮೆನಿಸಿ ಪಳಿಕಿನ ಪಟ್ಟವಣೆ ಕೇಸಡಿಯ ಕೆಂಪಿನಿಂದರುಣಮಣಿಯನೊಟ್ಟೈಸೆ ಮೆಟ್ಟನಿಲ್ವುದುಮಾ ನಿತಂಬಿನಿಯ ನಿತಂಬಸೂತ್ರದೊಳ್ ತೊಡರ್ಚಿದ ತೋರಮುತ್ತುಗಳಂತೆಯುಂ ಆ ವೃತ್ತಕುಚೆಯ ಕುಚಕಳಶದೊಳೊಸರ್ವ ಲಾವಣ್ಯರಸಬಿಂದುಗಳಂತೆಯುಂ ಆ ಕನಕಕೇತಕೀದಳನಖಿಯ ನಖಮುಖದೊಳುಣ್ಮುವ ಮಯೂಖಮಂಜರಿಯಂತೆಯುಂ ಆ ಚಳಾಳಕೆಯಳಕವಲ್ಲರಿಯೊಳ್ ಬೆಳರ್ತ ಬಿರಿಮುಗುಳಂತೆಯುಂ ಓರೊಂದೆ ಜಲಬಿಂದು ಬಿಡುತರ್ಪುದುಂ—

ಆ ರಮಣಿಯ ತನುಲತೆಯಿಂ
ವಾರಿಕಣಪ್ರಚಯಮಂ ದುಕೂಲಾಂಚಲದಿಂ
ವಾರಾಂಗನೆಯರ್ ತೊಡೆದರ್
ನೀರಂಜಿಸುವಂತೆ ಮಣಿಶಲಾಕೆಯನಾಗಳ್ ೩

ನಗೆಗಣ್ ಸೂಸೆ ವಿಳಾಸಮಂ ನಗೆಮೊಗಂ ಲಾವಣ್ಯಮಂ ಬೀರೆ ಸಾ-
ವಗಿಸುತ್ತು ಕಚಬಂಧಮಂ ಶಿಥಿಲ ನೀವೀಬಂಧಮಂ ಕಾಂಚಿಯೊಳ್
ತೆಗೆಯುತ್ತುಂ ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ
ಬಗೆಯಂ ಬಲ್ಸೆರೆಗೆಯ್ಯೆ ಬಾಲೆ ಮೆರೆದಳ್ ಲೀಲಾಪದನ್ಯಾಸಮಂ ೪

ಅಂತು ಬಂದು ಚೆಂಬೊನ್ನ ಕನ್ನೆಮಾಡದ ಮೊಗಸಾಲೆಯೊಳಿಕ್ಕಿದ ಮುತ್ತಿನ ಚಿತ್ತರಿಕೆಯೊಳ್ ಕುಳ್ಳಿರ್ದುಂ ಮೇಳದಂಗನೆಯರ್ ಮಂಗಳ ಪಪದನಂಗೊಳಿಸಲವಸರಂಬಡೆದು ವಿಚಿತ್ರ ಚೀನಾಂಬರಮಂ ಸಿರಿವಿಡಿದು ಡಿಸಿ, ಕೆಂದಾವರೆಯುನೆಳವಿಸಿಲೆಳಸಿದಂದಮಾಗೆ ಲಾಕ್ಷಾರಸದಿನಡಿಯೂಡಿಯುಂ ಚರಣನಖಚಂದ್ರಮಾಲೆಗೆ ನಕ್ಷತ್ರಮಾಲೆಯುನೋಲಗಿಸುವಂತೆ ಮುಕ್ತಾಫಲನೂಪುರಮಂ ತುಡಿಸಿಯುಂ ಪುಳಿನವಳಯುಮಂ ಪೊಂದಾವರೆಯ ಬಳ್ಳಿ ಬಳಸಿದಂತೆ ನಿತಂಬವಳಯದೊಳ್ ಮಣಿಮೇಖಲೆಯಂ ತೊಡರ್ಚಿಯುಂ ಮದನಮಂದಿರದನಿರದನದೊಳ್ ಕೀರ್ತಿಮುಖಮಂ ಕೀಲಿಸುವಂತೆ ಶತಪತ್ರಭಂಗಮಂ ತುಂಗಸ್ತನಾಭೋಗದೊಳ್ ಸಂಗಳಿಸಿಯುಂ ಪೀವರಪಯೋಧರಮಂಡಲಕ್ಕೆ ಪರಿವೇಷಮಂ ಪಡೆವಂತೆ ಪಂಚರತ್ನದ ಬಣ್ಣಸರಮಂ ಕೊರಲೊಳಿಕ್ಕಿಯುಂ ಬಾಹುಲತೆಯ ಬೆಳಲಂತೆ ರತ್ನಕಾಂತಿ ಕವಲ್ವರಿವಿನಮಂಗದಮುನಳವಡಿಸಿಯುಂ ಸಿರಿಸದ ಬಾಸಿಗಮಂ ಭೃಂಗಮಾಲೆ ಬಳಸುವಂತೆ ನಳಿತೋಳೊಳ್ ಪಚ್ಚೆಯ ಪಿಂಡುಗಂಕಣಮನೇರಿಸಿಯುಂ ನನೆಗಣೆಗೆ ಗರಿಗಟ್ಟುವಂತಂಗುಲಿಯೊಳ್ ರತ್ನಮುದ್ರಿಕೆಯಂ ಮುದ್ರಿಸಿಯುಂ ಸ್ಮರವಶೀಕರಣಯಂತ್ರಮಂ ಬರೆವಂತೆ ಕಪೋಲತಳದೊಳ್ ಮಕರಿಕಾಪತ್ರಮಂ ಬರೆದುಂ ಪೂಸಮಸೆಯ ಪೂಗಣೆಗೆ ಪೊಗರಂ ಪಡೆವಂತೆ ನಗೆಗಣ್ಗಳೊಳಂಜನಮನಣ್ಕೆಗೆಯ್ದುಂ ಕರ್ಣಾಂತವಿಶ್ರಾಂತವಿಲೋಚನದೊಳ್ ಪಡಿಯಿಟ್ಟು ನೋಳ್ಪಂತೆ ಕಿವಿಯೊಳವತಂಸೋತ್ಪಲಮಂ ತೊಡರ್ಚಿಯುಂ—

ಉಗುರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿವಂತೆ ಮೆಲ್ಲಮೆ-
ಲ್ಲಗೆ ತಲೆವಿಕ್ಕಿ ಚಂದ್ರಕಿರಣಂಗಳನಾಗಳೆ ರಾಹು ನುಂಗಿ ಮು-
ತ್ತುಗುಳ್ದಪುದೆಂಬಿನಂಮುಡಿಸಿಬಾಲೆಯಸೋರ್ಮುಡಿಯಂ ಲಲಾಟದೊಳ್
ಮೃಗಮದಬಿಂದುವಂ ಪೆರೆಗೆ ನುಣ್ಗೆರೆಯಂ ಪಡೆವಂತೆ ತಿರ್ದಿದರ್ ೫

ಆಗಳಾಕೆಯ ಮಂಗಳವಸದನಮೇ ತನಗೆ ಬೀರವಸದನಮಾಗೆ—

ಬಾಲೆಯ ಕಡೆಗಣ್ಣೋಟಮೆ
ಸಾಲದೆ ನನೆಗಣೆಗಳೇವುವೆಂದು ಮನೋಜಂ
ಶೂಲಿಯ ನೊಸಲುರಿಗಣ್ಣಿಂ
ಪೀಲಿಯ ಕಣ್ಣೆಂಬನಾವನೆನಗಿದಿರೆಂಬಂ ೬

ಮನಸಿಜನೆನೆ ರತಿಯೆನೆ ಕ-
ರ್ವಿನ ಬಿಲ್ಲೆನೆ ಕುಸುಮಬಾಣನೆನೆ ಕೋಕಿಲನಿ-
ಸ್ವನಮೆನೆ ಮಧುಕರ ಝಂಕೃತ-
ಮೆನೆ ಸೀತೆಯ ಪಸದನಕ್ಕೆ ಪರ್ಯಾಯಂಗಳ್ ೭

ತೊಡವುಗಳೇ ಸರೋಜದಳನೇತ್ರೆಯ ಮೆಯ್ವೆಳಗಿಂದುಪಾಶ್ರಯಂ-
ಬಡೆದುವು ನೋಳ್ಪರುಮ್ಮಳಿಸುವಂತಿರೆ ರತ್ನ ವಿಭೂಷಣಂಗಳಿ-
ರ್ದೆಡೆಯ ವಿಳಾಸಮಂ ಮೆರಸಿದಪ್ಪುವೆನಲ್ ತೊಡವಾಕೆಗೊಪ್ಪಮಂ
ಪಡೆವೆಡೆಗಲ್ಲಮಾ ವಧುಗೆ ಮಂಗಳಕಾರಣಮಲ್ತೆ ಭೂಷಣಂ ೮

— ೨ —

ಆಗಳ್ ಕೂಸಂ ನೆರೆಯೆ ಕೆಯ್ಗೆಯ್ಸಿಮೆಂದು ಅಂತಃಪುರ ಪುರಂಧ್ರಿಯರಂ ಕರೆದು ಪೇಳ್ವುದುಮಂತೆಗೆಯ್ವಪೆಂಗು--

ಈ ಪೊಳ್ತಿಂಗೀ ರುತುವಿಂ-
ಗೀ ಪಸದನಮಿಂತುಟಪ್ಪ ಮೆಯ್ವಣ್ಣಕ್ಕಿಂ
ತೀ ಪೂವಿನೊಳೀ ತುಡುಗೆಯೊ-
ಳೀ ಪುಟ್ಟಿಗೆಯೊಳ್ ಬೆಡಂಗುವಡೆದೆಸೆದಿರ್ಕುಂ ೯

ಎಂದು ನೆರೆಯೆ ಪಸದನಂಗೊಳಿಸಿ—

ತುಡಿಸದೆ ಹಾರಮಂ ಮೊಲೆಯ ಬಿಣ್ಪಿನೊಳಂ ನಡು ಬಳ್ಕಿದಪ್ಪುದೀ-
ನಡುಗುವುವಲ್ಲವೇ ತೊಡೆ ನಿತಂಬದ ಬಿಣ್ಪಿನೊಳೀವುದಕ್ಕೆ ಪ್ರೋ
ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೇಂ
ತುಡಿಸುವುದಕ್ಕ ನೂಪುರಮನೀ ತೊಡವೇವುದೊ ರೂಪೆ ಸಾಲದೇ ೧೦

ಎಂದೆಂದೋರೊರ್ವರಾಕೆಯ ರೂಪಂ ವಕ್ರೋಕ್ತಿಯೊಳ್ ಪೊಗಳ್ದು ಮಂಗಳವಸದನಮಿಕ್ಕಿಯುಂ ಪೊಸಮುದವಳಿಗೆಯುಪ್ಪುದರಿಂ ತುಡಿಸಲೆ ವೇಳ್ಕುಮೆಂದು ನೆರೆಯೆ ಪಸದನಂಗೊಳಿಸೆ-

ಮಸೆದುದು ಮದನನ ಬಾಳ್ ಕೂ-
ರ್ಮಸೆದುದು ಕಾಮನಂಬು ಬಾಯ್ಕೂಡಿದುದಾ
ಕುಸುಮಾಸ್ತ್ರನ ಚಕ್ರಮಿದೆಂ-
ಬೆಸಕಮನಾಳ್ದತ್ತು ಪಸದನಂ ದ್ರೌಪದಿಯಾ ೧೧

— ೩ —

ಒದವಿ ಗಂಗಾದೇವಿಸಿಂಧುದೇವಿಯರು ರಾ-
ಗದೊಳಣ್ಣನೊತ್ತಿಗೆ ಬಂದು
ಮದುವೆಗೆ ಸಿಂಗರಿಸಿದ ಪೆಣ್ಣ ನಾವು ನೋ-
ಡಿದರಾಗದೆಯೆಂದರೊಡನೆ ೧೨

ಸಲಲಿ ನಿಮ್ಮರ್ತಿಯೆಂದೊಡನೆ ಬೀಳ್ಕೊಟ್ಟನಾ-
ಗಳೆ ಹೋಗಿ ಹೊಕ್ಕರಾ ಗೃಹವ
ಅಳಿಯನ ತಂಗಿಯರೆಯ್ತಂದರೆಂದತ್ತೆ
ನಲಿದು ಸಮ್ಮಾನಮಾಡಿದಳು ೧೩

ಕಾಲ ತೊಳೆಯಿಸಿ ಸೇವಕಿಯರಿಂದೊಡನೆ ನಿ-
ವಾಳಿವಿಡಿಸಿ ಕುಳ್ಳಿರಿಡಿಸಿ
ಲೋಲನೇತ್ರೆಯರಿರಾ ಕುಳ್ಳಿರಿಯೆಂದಳಾ
ಲೋಲೆ ಯಶೋಭದ್ರಾದೇವಿ ೧೪

ಇಲ್ಲಿ ಬೇಡಾವು ನಮ್ಮತ್ತಿಗೆಯೊತ್ತಿನೊ-
ಳಲ್ಲದೆ ಕುಳ್ಳಿರೆವಾಕೆ
ಎಲ್ಲಿಹಳೀಕ್ಷಿಸಬೇಕೆನೆ ಮಣಿಮಾಡ-
ದಲ್ಲಿಗೇರಿಸಿದಳರ್ತಿಯೊಳು ೧೫

ಸೂಸುಮೋಹನದ ಸಿಂಗರದೊಟ್ಟು ತನ್ನ ವಿ-
ಲಾಸಿನಿಯರ ಬಳಸಿನೊಳು
ಪೂಸರಲನ ಪುಣ್ಯದೇವತೆಯಂತಿರ್ದ
ಭಾಸುರಾಂಗಿಯು ಕಂಡಳಾಗ ೧೬

ನಿನ್ನರಸನ ತಂಗಿಯರು ಬಂದರೇಳಕ್ಕ
ಮನ್ನಿಸೆಂದಳು ತಾಯಿ ಮಗಳ
ಚೆನ್ನೆಯೆದ್ದಿದಿರಾಗಿ ಬಂದಳನ್ಯೋನ್ಯಪ್ರೇ-
ಮನ್ನೆಡಲಾಲಿಂಗಿಸಿದರು ೧೭

ಮೂವರೊಂದಾಗಿ ಕುಳಿತರು ಯಶೋಭದ್ರಾ-
ದೇವಿ ಕೆಲದೊಳು ಕುಳಿತಳು
ಸೇವೆಯ ನರಸುರ ಸತಿಯರು ಬಳಸಿಯಂ-
ದಾ ವಿಭವದೊಳಿರ್ದರಾಗ ೧೮

ನೋಡಿದರಾಕೆಯ ಹಾವಭಾವಗಳ ಮಾ-
ತಾಡುವಂತೆಸೆವ ಸಿಂಗರವ
ನಾಡಾಡಿ ವೆಣ್ಣಲ್ಲ ಚಕ್ರವರ್ತಿಯ ಮರು-
ಳ್ಮಾಡುವಳೆಂದು ನೆನೆದರು ೧೯

ಕಾರಿರುಳೊಳು ಮಿನುಮಿನುಗಿ ಕಾಣಿಸುತಿಹ
ತಾರಗೆಗಳ ಬಂಬಲಂತೆ
ತೋರಮುಡಿಯೊಳೆಳೆಮುತ್ತಿನ ಬಲೆಯ ಶೃಂ-
ಗಾರವೊಪ್ಪಿರೆ ನಿಟ್ಟಿಸಿದರು ೨೦

ಕಾಳಿಂದಿಯಿದಿರೊಳು ಸುರಗಂಗೆ ಹರಿವುದ
ಕೇಳಿತಿಲ್ಲವೆ ಕಂಡೆವೆಂದು
ನೀಲಕುಂತಳದೆಳೆಮುತ್ತಿನ ಬೈತಲೆ-
ಗಾ ಲಲನೆಯರು ಮೆಚ್ಚಿದರು ೨೧

ಹರಳೋಲೆ ಮಕರಿಕಾಪತ್ರ ಮೂಕುತಿ ಸಣ್ಣ
ಗೆರೆಯ ತಿಲಕ ಚವಚವಿಸೆ
ಸುರಸತಿಯರು ನೋಡಿ ಸೋತರಾ ಮೊಗಕಿನ್ನು
ನರಸತಿಯರು ಸೋಲ್ವುದರಿದೆ ೨೨

ವಸ್ತುಕ ವರ್ಣಕ ಕೃತಿಯ ಲಿಪಿಯ ಸಾಲು
ಪುಸ್ತಕದೊಳಗೆಸೆವಂತೆ
ಪುಷ್ಟಿಯ ಚಿಂತಾಕು ಮಣಿಸರ ಬಂದಿ ಪ್ರ-
ಶಸ್ತವಡೆದುವು ಕಂಠದೊಳು ೨೩

ಹಸ್ತಕಡಗ ಗೌಳಸರ ಬಳೆ ಭುಜಕೀರ್ತಿ
ಪ್ರಸ್ತುತದುಂಗುರ ತಾತಿ
ಹಸ್ತಿಯ ಸುಂಡಿಲ ನಗುವ ಹಸ್ತಗಳಲ್ಲಿ
ಹಸ್ತಿಗಮನೆಗೆ ಮೆರೆದುವು ೨೪

ಪವಳ ಹಾರವ ಹೇರಲಡಕದಿ ಬಳೆದುವ-
ಲ್ಲದರಿನ್ನು ಹೆಚ್ಚುವುವೆನಲು
ಎದೆತುಂಬಿ ಬಳೆದ ಬಲ್ಮೊಲೆಗಳಾ ಹಾರವ
ಪದಕವನಾಂತು ಮೆರೆದುವು ೨೫

ತೂಕದ ಮೊಲೆಗಳ ಬಡನಡು ತಾಳದೆಂ-
ದಾ ಕಾಂತೆ ಚಿನ್ನದ ಕಟ್ಟ್ಯಾ
ಜೋಕೆಗೈದಳೊಯೆ ನೆ ನವರತ್ನದ ಚಿಂ-
ತಾಂಕು ತೋರಿತು ನಡುವಿನೊಳು ೨೬

ಎರಡುಬಿಟ್ಟವ ಮುಟ್ಟಿ ಕಾಮನ ಬಿಲ್ಲು ಶೇ-
ಖರಿಸಿ ಮೂಡಿದುದೊಯೆಂಬಂತೆ
ಬೆರಕೆವರಲ ಹೊನ್ನ ನೇವಳ ಹೊಳೆದುದಾ
ತರುಣಿಯು ಕಟಿತಟಾಗ್ರದೊಳು ೨೭

ಕರೆಗೊಂಡ ಬೆಳ್ಮುಗಿಲೊಳು ಚಿತ್ರವೆನೆ ದಿಟ್ಟಿ-
ಗುರಿವ ಮಿಂಚಿನ ಗೊಂಚಲಂತೆ
ನಿರಿವಿಡಿದುಟ್ಟ ದೂವಟದ ಸೀರೆಯ ಮೇಲೆ
ಮೆರೆದುದು ಹೊನ್ನ ಗೊಂಡೆಯವು ೨೮

ರಾಗರಸಾಬ್ಧಿಯ ತೆರೆಗಳೊ ಮದುವೆಗೆ
ಸೀಗುರಿಗಳ ಮಾಳ್ಪುಡೀಕೆ
ತೂಗಿ ಮೇಲ್ಪಂಕಿದೋರ್ಪಳೊಯೆನೆ ನಿರಿಗಳ
ಸಾಗಿಸಿದುಡಿಗೆ ಮೋಹಿಸಿತು ೨೯

ಚಂಡಮಾರನ ವೀರವಿತರಣಗುಣಕೀರ್ತಿ-
ಗೊಂಡ ಕಲಾಪಟ್ಟವೆನಲು
ಪೆಂಡೆಯ ಪಾದವಟ್ಟಗಳೊಪ್ಪಿದುವು ಚಂದ್ರ-
ಮಂಡಲಮುಖಿಯಡಿಗಳೊಳು ೩೦

ಬೆಳ್ಳುಗುರ್ಗಳಗಲತಗೆಯೂಡಿ ಮಿಂಚಿಕ್ಕಿ
ಪಿಲ್ಲಿಯುಂಗುರವು ಕಣ್ಗೆಸೆಯೆ
ಸಲ್ಲಲಿತಾಂಗಿಯ ಕೆಂಬಜ್ಜೆ ಮೆರೆದುವು
ಚೆಲ್ಲುವಂತನುರಾಗರಸವ ೩೧

ಅಂಜನವರ್ಣದ ಸಣ್ಣರವಕೆಯುಪ-
ರಂಜಿಯಂಪದ ಮೈಗೆ ಮೆರೆಯೆ
ಮಂಜುವಸ್ತ್ರದ ಮೇಲುಸೆರಗು ಬೆಡಂಗಿಳಿ-
ದೇಂ ಜಾಣೆ ದಿಟ್ಟಗೊಪ್ಪಿದಳೊ ೩೨

ಕಂಗೊಳಿಪೊಳವಸ್ತ್ರದೊಂದು ಕೆಂಪಿಂದ ಶು-
ಭ್ರಾಂಗವಸ್ತ್ರಕೆ ಕೆಂಪು ರಮಿಸೆ
ರಂಗುಮಾದಳದ ಸೀರೆಯನುಟ್ಟಳೆಂಬ ಬೆ-
ಡಂಗಿನೊಳೆಸೆದಳಾ ಸೀರೆ ೩೩

ಜೂಳಿಯು ಚಿನ್ನ ಪೂ ಕಮಲಪೂ ಚಳಿಕಿಗೆ
ತಾಳಿಪೂ ಬೆಂಬಚ್ಚಿದಂಡೆ
ಕೋಳೊಂಕಿ ಕರ್ಣಕೆ ಸರಪಣಿ ಮೊದಲಾಗಿ
ಬಾಲೆಗಾಭರಣವೊಪ್ಪಿದುವು ೩೪

ಗಂಡನ ಬಾಸಿಗದೊಡನೆ ರಾತ್ರಿಗೆ ತನ್ನ
ತೊಂಡಿಲು ಮೆರೆವುದಿನ್ನದನು
ಮಂಡಿಪುದೊಂದಲ್ಲದುಳಿದ ಭೂಷಣವೆಲ್ಲ
ಮಂಡಳಿಸಿದ್ದು ವಂಗನೆಗೆ ೩೫

ವೈವಾಹದುಚಿತವಲ್ಲದೆ ತೊಡವೇಕೆ ಸ್ವ-
ಭಾವ ಶೃಂಗಾರಾಂಗಿಯುವಳು
ಹೂವಿಂದ ನಾರೊಪ್ಪುವಂತೆಯಾಕೆಯು ನೋಂಕಿ
ಪಾವನವಾದುವು ತೊಡಿಗೆ ೩೬

ಆಭರಣಗಳಾಕೆಯಂಗವ ಸೋಂಕಿ ಕ-
ಳಾಭರಿತಗಳಾದುವಿನ್ನು
ಆ ಭಾವೆ ಭರತರಾಜೇಂದ್ರನ ಸೋಂಕಿ ಮ-
ಹಾಭೂಷಣಾಂಗಿನಿಯುಪಳು ೩೭

ಸಖಿಯರು ಕೊಡುವೆಲೆಘಳಿಗೆಯ ಕೊಳುತ ಸ-
ಮ್ಮುಖದೊಳಿದ್ದ ಮರಕಾಂತೆಯರ
ಮುಖವ ನೋಡುತ ಸುಮ್ಮನಿರ್ದಳು ಗಂಭೀರ-
ಸುಖಿಯು ಪಟ್ಟದ ರಾಣಿಯಲ್ತೆ ೩೮

ನೀನೇ ನಮ್ಮಣ್ಣನ ನೋಲಿಸಳೆಂದವ-
ರಾನಂದದಿಂದ ಕೇಳಿದರು
ಏನದು ದೊಡ್ಡಿತೆ ನನಗೆಂದು ನಗುವಂತೆ
ಮೋನದೊಳ್ನಗುತಿರ್ದಳಾಕೆ ೩೯

ಈ ತಿಲಕವೆ ಚಕ್ರಧರನ ಸೋಲಿಪುದು ಪೇ-
ಳೀ ತುರುಬಿ ಮುತ್ತೀಪೂವೆ
ಮಾತಾಡು ಹೆಣ್ಣೆಯೆಂಬರು ಲಜ್ಜೆಯಿಂದಾಕೆ
ಸೋತಂತೆ ತಲೆಗುಸಿರಿಹಳು ೪೦

ಕೈಯಿಂದ ಮೊಗವಿಡಿದೆತ್ತಿ ನಗುತ ನೋಳ್ಪ-
ರಯ್ಯಯ್ಯೊ ನಿನ್ನಯ ಜಾಣ್ಮೆ
ಮೆಯ್ಯುಳ್ಳ ಮದನ ನಿನಗೆ ಮೆಚ್ಚುವನೆ ನಮ್ಮೊ-
ಳೊಯ್ಯನೆ ನುಡಿಯೆಂಬರೊಸೆದು ೪೧

ಕಡೆಗಡ್ಡ ಮೊಗವಿಕ್ಕಿ ಸುಮ್ಮನಿಹಳು ನೋಡಿ
ನುಡಿಗೆಟ್ಟ ಹೆಣ್ಣಿಗೆಮ್ಮಣ್ಣ
ಕಡುಸೋತುದಾಯ್ತಲ್ಲಯೆಂದೊತ್ತಿ ಚುನ್ನವ
ನುಡಿದರದಕೆ ನಗುತಿಹಳು ೪೨

ಸರಸಗುಣಗಳಿಲ್ಲದಿವಳ ರೂಪೇನು ಕಾ-
ಸರಕನ ಹಣ್ಣಿನಂತೆಂದು
ಕೆರಳಿಸಿ ನುಡಿವರು ಮಾತಾಡಬೇಕೆಂದು
ಶಿರಬಾಗಿ ನಗುತಿಹಳಾಕೆ ೪೩

ಇಂತು ನುಡಿಯುಳಾಕೆ ನಾಳೆ ನಾಡಿದು ನೀವು
ಬಂದೊಮ್ಮೆ ಮಾತಾಡಿ ನೋಡಿ
ಒಂದೊಂದೆ ನುಡಿಯೊಳೆ ಕಟ್ಟಿಬಿಡುವಳು ಸಾ-
ಕೀದಿಗೆಂದಳು ಮಧುವಾಣಿ ೪೪

ನಿಮ್ಮ ಪಾಡೇನು ನಿಮ್ಮಣ್ಣನ ನುಡಿಗಳ-
ನೊಮ್ಮೊಮ್ಮೆ ಕಟ್ಟಿ ನಿಲ್ಲಿಪಳು
ನಮ್ಮ ದೇವಿಯು ಮುಂದೆ ಪರರಿಗೆ ಜಾಣ್ಮೆಯೇ
ನಮ್ಮ ಸ್ವೈರಿಸಿರೆಂದಳವಳು ೪೫

ಅಲ್ಲವೆ ಪೇಳೀಕೆಗುರಿ ತನ್ನ ಪತಿಯೊಡ-
ನಲ್ಲದೆ ನುಡಿಯದ ಫಲವೆ
ಒಳ್ಳಿತಾಯ್ತಿದ ಪೇಳ್ವೆವೆಮ್ಮಣ್ಣಗೆಂದರು
ನಲ್ಲವೆಣ್ಣದೆ ನಾಚಿ ಬೆದರೆ ೪೬

ಏಕೆ ಕಾಡುವಿರಿ ನಿಮ್ಮಣ್ಣನೊಳ್ನಿಮ್ಮೊಡ-
ನೀ ಕನ್ನೆ ನುಡಿದು ಗೆಲ್ವವಳೆ
ಸಾಕು ಸ್ವೈರಿಸಿರೆಂದು ವಿನಯದಿಂದವರಿಗ-
ಚ್ಚಾಕಾರಗೈದಳಾ ತಾಯಿ ೪೭

ನಿಮ್ಮಣ್ಣನಗ್ಗಳ ನೀವು ದೇವಸ್ತ್ರೀಯ-
ರೆಮ್ಮೊಳೇನುಂಟಕ್ಕಂದಿರಿರಾ
ನಿಮ್ಮವರೆಂದೆಮ್ಮ ಕೂಡಿಕೊಂಡಿರಿಯೆಂದು
ಹಮ್ಮಳಿದೊರೆದಳಾ ಜನನಿ ೪೮

ಸುರಸತಿಯರಿಗಧಿಕದ ಪೆಣ್ಣ ಪೆತ್ತೆ ಭೂ-
ವರಕುಲೋತ್ತಂಸನಿಗಿವಳಾ
ಪರಿಣಯನವ ಮಾಳ್ಪ ಸಿರಿವೆತ್ತೆ ನೀನೆ ಭಾ-
ಸುರಪುಣ್ಯವತಿಯೆಂದರವರು ೪೯

ಇವಳ ವಿವಾಹಕಾರಣವಾಗಿ ನಾವಿಂದು
ತವರುಮನೆಯ ಕಂಡೆವಾಗಿ
ಇವಳಲ್ಲದೆಮಗಾರು ಹಿತವೆಯರೆಂದು ಮು-
ತ್ತವರು ಸಂತಸದೊಳಾಡಿದರು ೫೦

ವಿನಯವಾಕ್ಯವನಿಂತು ನುಡಿದು ಮತ್ತಣ್ಣನ
ವನಿತೆಗಾಭರಣವಸ್ತ್ರಗಳ
ಅನುರಾಗದಿಂದಿತ್ತು ಪೋಪೆವೆಂಗಂದೊಂದು
ಬಿನದವ ತೊಡಗಿದರೊಡನೆ ೫೧

ಅತ್ತಿಗೆ ನೋಳ್ಪೆವುಂಗುರಗಳ ತೋರೆನು-
ತೊತ್ತಿ ತೆಗೆದು ಬೆರಳಿಂದ
ಇತ್ತಳು ಕುರುಹನೆಂದಿವ ನಿನ್ನ ಪುರುಷನಿ-
ಗಿತ್ತಪೆವೆನುತಿದ್ದರೊಡನೆ ೫೨

ಏಳೇಳಲಿಬ್ಬರ ಕೈವಿಡಿದಳು ಕುಳಿ-
ತೇಳದೆ ಕೈಗಳ ನೀಡಿ
ಚಾಳಿಸಿ ಪೋಪೆವೆಂದತ್ತಿತ್ತಲೊಲೆದರು
ಬಾಲೆ ಬಲ್ಪಿಡಿದು ತೆಗೆದಳು ೫೩

ತಮ್ಮ ಶಕ್ತಿಯು ಮಿಕ್ಕ ಶಕ್ತಿಯು ಕಾಣುತ
ಹೆಮ್ಮೆಕ್ಕಳೊರೆದರಾ ಕ್ಷಣವೆ

ನಮ್ಮ ಚಕ್ರಿಯು ಸೊಕ್ಕ ನಿಲಿಪಳೆಂದರು ನಕ್ಕು
ಹೆಮ್ಮಕ್ಕಳೆಲ್ಲರರ್ತಿಸಲು ೫೪

ಸಂಧಾನಕೆಂದೆಯ್ದಿ ಸೂರೆಮಾಡಿದರೆಂಬ
ಅಂದದೋರ್ಪಿರಿಯೆಂದು ನಗುತ
ಸಿಂಧೂರದಂತಾಯ್ದು ಕೊಂಡಳುಂಗುರಗಳ
ತಾಂ ದನಿದೋರುತವರೊಳು ೫೫

ನುಡಿ ಪೊಣ್ಮಲಾಕೆಯ ಧ್ವನಿ ಸ್ವರ್ಗವೀಣೆಯ
ನುಡಿಸಿದಂತಿಂಪಾಯ್ತು ಕಿವಿಗೆ
ನುಡಿಗೇಳಬೇಕೆಂದು ತೊಡಗಿದ ಕಾರ್ಯ್ಯ ಸಂ-
ಗಡಿಸಿತೆಂದವರು ನಲಿದರು ೫೬

ಎಂತೆಂತುಟನ್ನೊಮ್ಮೆ ಹೇಳೆಂದರಾಕೆ ಮು-
ನ್ನೆಂತಿದ್ದಳಂತೆ ಮೋನದೊಳು
ತಾಂ ತೆಪ್ಪಗಿದ್ದಳಾ ಗಂಭೀರಕಾ ದೇವ-
ಕಾಂತೆಯರರ್ತಿಮಾಡಿದರು ೫೭

ಪ್ರವರಶಕ್ತಿಯು ನಿನ್ನ ತವರುಮನೆಯೊಳು ತೋ-
ರುವೆಯ್ಯೆಸೆ ಸೈರಿಸಿನ್ನೆಮ್ಮ
ತವರುಮನೆಗೆ ನೀನು ಬಂದಾಗ ಪೇಳ್ವೆವೆಂ-
ದವರೆದ್ದುರುರೆ ಪಚಾರಿಸುತ ೫೮

ಬಳಿಸಂದು ಸಗುತ ಯಶೋಭದ್ರಾದೇವಿ ಮಂ-
ಗಳವಸ್ತುವಿತ್ತಳವರಿಗೆ
ನಲಿದುಚಿತವನಾಕೆಗವರಿತ್ತರುತ್ಸಾಹ
ಬಳೆಯೆ ಬೀಳ್ಕೊಂಡರಕ್ಷಿತ್ತ ೫೯

# ವಿವಾಹ ಮಂಗಲ

ಹರಿನೀಲಸ್ತಂಭಮಂ ಜಾಗದ ಪಡಲಿಗೆಯುಮಂ ತುಂಗ ಭೃಂಗಾರಮುಮಂ ನೆ-
ರ್ವಿರೆ ಭಾಸ್ವದ್ಭಿತ್ತಿಯುಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನಮಧ್ಯಾ-
ಜಿರಮಂ ಮುಕ್ತಾವಲೀ ರಂಗವಲಿ ಬಳಸೆ ಕರ್ಕೇತನದ್ವಾರಶಾಖಾಂ-
ತರಮಂ ರತ್ನಸ್ಫುರತ್ತೋರಣಮೊಳಸೆ ಬೆಡಂಗಾದುದುದ್ವಾಹಗೇಹಂ ೧

ಆದರ ಮಧ್ಯಪ್ರದೇಶದೊಳ್—

ಮರಕತ ಮಂಗಲವೇದಿಕೆ
ಘರಾಂಗನಾಕೇಶಬಂಧದಂತಿರೆ ಮುಕ್ತಾ-
ವಿರಚಿತ ರಂಗವಲಿ ಮನೋ-
ಹರಮಾದುದು ತೊಳಗಿ ಪೊಳೆವ ತಲೆದುಡುಗೆಯವೋಲ್ ೨

ಪಸುರ್ವರಲ ಜಗಲಿಯೊಳ್ ರಂ-
ಜಿಸಿದುದು ಚೆಂಬೊನ್ನ ಪಟ್ಟವಣೆ ಪಸುರೆಲೆಯಿಂ
ಮುಸುಕಿದ ತಾವರೆಗೊಳದೊಳ್
ಪಸುರ್ಗಳಿದು ಮರಲ್ದರಲ್ದ ಪೊಂದಾವರೆವೋಲ್ ೩

ಎಳ ಅಡಕೆಯ ಗೊನೆಯಿಂ ಮಾ-
ತುಳಂಗದಿಂ ನಾರಿಕೇಳಫಲದಿಂ ದ್ರಾಕ್ಷಾ-
ಫಳದಿಂ ಕಾಂಚನಕದಳೀ-
ಫಳದಿಂದೊಪ್ಪಿದುದು ವೇದಿಕಾಂತರ್ಭಾಗಂ ೪

ಬಿಸಸೂತ್ರತ್ರಿತಯಂ ಯವಾಂಕುರಕೃತಗ್ರೈವೇಯಕಂ ಪಲ್ಲವೋ-
ಲ್ಲಸಿತಾದರ್ಶಸುದರ್ಶನೀಯಮಮಲ ಸ್ರಕ್ಸುಂದರಂ ಪಂಚರ
ತ್ನಸಮಸ್ತೌಷಧಿಗರ್ಭಮಕ್ಷತಯುತಂ ದೂರ್ವಾಂಚಿತಂ ಸರ್ವಧಾ
ನ್ಯಸಮುತ್ತಂಭಿತ ಪೂರ್ಣಕುಂಭಮೆಸೆದತ್ತಾ ವೇದಿಕಾಮಧ್ಯದೊಳ್ ೫

ಅನುರೂಪಂ ಸ್ಫಟಿಕಾಬ್ಜದೊಳ್ ದಧಿ ಸುವರ್ಣಕ್ರೌಂಚದೊಳ್ ರೋಚನಂ
ಘನ ಹಾರೀತಕ ಹಂಸಿಯೊಳ್ ಹರಿತದೂರ್ವಂ ರಾಜತದ್ರೋಣಿಯೊಳ್
ಘನಸಾರಂ ಹರಿನೀಲಶುಕ್ತಿಕೆಗಳೊಳ್ ಕಸ್ತೂರಿ ಮಾಣಿಕ್ಯಭಾ-
ಜನದೊಳ್ ಕುಂಕುಮಪಂಕಮೇಂ ಮೆರೆದುವೋ
ಮಾಂಗಲ್ಯಸಾಕಲ್ಯಮಂ ೬

ಶಂಕುಶಲಾಕೆಯಿಂ ಗಳಿಗೆವಟ್ಟಲುಮೊಪ್ಪಿರೆ ವೇದನಾದದೊಳ್
ಸಂಕರಮಾಗಿ ಪಾಠಕಪಟುಸ್ವನಮಂಗಳಗೀತತೂರ್ಯಘೋ-
ಷಂ ಕಡಲೂರ್ಮಿಯಂತುಲಿಯೆ ನರ್ತಿಸೆ ನಾರಿಯರಾಯ್ತು ಸಾರ್ಕೆ ಲ-
ಗ್ನಂ ಕರೆಯಿಂ ವಧೂವರರನೆಂದುಸಿರ್ದರ್ ಹಿತದೊಳ್ ಪುರೋಹಿತರ್ ೭

ಕುಡುವುರ್ವಿಂ ಕಟುರ್ಪಿಲ್ಲಿಂ ಪರಪುವ ಕಡೆಗಣ್ಣಿಂ
ಮನೋಜಾಸ್ತ್ರಮಂ ಸೂ-
ಳಿಡುವುದ್ಯನ್ಮೇಖಲಾಕೂಜಿತಜಿನತನುಕೋದಂಡಟಂಕಾರಮಂ ಕ-
ನ್ನಡಿಪಂಕ್ತಿನ್ಯಾಸದಿಂ ತಾವರೆಗೆದರುವ ಮಂದಸ್ಮಿತದ್ಯೋತದಿಂದಿಂ-
ಗಡಲಂ ಮತ್ತೊಂದನುತ್ಪಾದಿಸುವ ತೆರದಿನಾನಂದದಿಂ ದೇವಿ ಬಂದಳ್ ೮

ಉರದೊಳ್ ಹಾರಾಂಶು ಗಂಡಸ್ಥಳಿಯೊಳಮಳಕರ್ಣಾವತಂಸಾಂಶು
ಮತ್ತಂ
ಶಿರದೊಳ್ ರತ್ನಾವಳೀಶೇಖರಶಿಖರಸಮುತ್ಕಾಂಶುಗಳ್ ನೃತ್ಯಮಂ ಬಿ-
ತ್ತರಿಪನ್ನಂ ಸಿದ್ಧವಿದ್ಯಾಧರದಿವಿಜಕುಮಾರರ್ಕಳಂ ಚೆಲ್ವಿನಿಂ ಮಾಂ-
ಕರಿಸುತ್ತುಂ ಬಂದನಾಸಾದಿತನಿರುಪಮಶೃಂಗಾರಸಾರಂ ಕುಮಾರಂ ೯

ಪಾಸಿದ ದಣಿಂಬದುಗುರ್ಗಳ
ಕೇಸಡಿಗಳ ಚರಣಭೂಷಣಂಗಳ ರುಚಿಗಳ್
ಬಾಸಣಿಸೆ ಚಿತ್ರಪಟಮಂ
ಪಾಸಿದವೋಲಿರೆ ವಧೂವರರ್ ನಡೆತಂದರ್ ೧೦

ಕಿವಿವೇಟವನಿರಿಸುತ್ತಿರೆ
ನವವರನಂ ನೋಡುವಪ್ಪುವುತ್ಕಳಿಕೆಯಿನೇಂ
ಯುವತಿಯ ಕಣ್ಣುಂ ಮನಮುಂ
ಜವನಿಕೆಯಂ ಕನ್ನವಿಕ್ಕಲಟಮಟಿಸಿದುವೋ ೧೧

ಜವನಿಕೆಯೋಸರಿಸುವುದುಂ
ನವವರನಂ ಕಣ್ಣ ಬೆಳಗಿನಿಂ ಮುಸುಕಿದಳಾ
ಯುವತಿ ಪಡೆದಪ್ಪಿದುದು ಮಾ-
ಧವನೀಕ್ಷಣಕಾಂತಿಯವಳ ಸರ್ವಾಂಗಮುಮಂ ೧೨

ನಾರಿಯರಿಕ್ಕೆ ಸೇಸೆಗಳನಾದರದಿಂದಿರದೆಯ್ದೆ ಪಾಡೆ ಶೃಂ-
ಗಾರಪಯೋಧಿ ಘೂರ್ಣಿಸುವವೋಲ್ ಕುಣಿದಾಡೆ ಕುಲಪ್ರಧಾನೆಯರ್
ಚಾರುಸುವರ್ಣಕುಂಭಭೃತಮಂಗಳವಾರಿಯನೆತ್ತಿಕೊಂಡು ಕೈ-
ನೀರೆರೆದಂ ವಧೂವರರ್ಗುದಾತ್ತಮನಂ ವಸುಧಾಧಿನಾಯಕಂ ೧೩

ಮುಸುಕಿದುದು ದುಂದುಭಿಧ್ವನಿ
ದೆಸೆಯಂ ಮಾಂಗಲ್ಯಗೀತರುತಿ ತುಂಬಿದುದಾ-
ಗಸಮಂ ಶಂಖಧ್ವನಿ ಪೂ-
ರಿಸಿದುದು ತಳ್ಪೊಯ್ದು ರೋದಸೀಮಂಡಳಮಂ ೧೪

ಪ್ರಿಯತರಲವಂಗಲವಲೀ-
ದ್ವಯಕ್ಕಮೇಕೈಕಲಲಿತಶಾಖಾಯೋಗಂ
ನಯದಿಂ ಸಮನಿಪವೋಲಾ-
ಪ್ರಿಯಂಗಮಾ ಪ್ರಿಯೆಗಮಾಯ್ತು ಪಾಣಿಗ್ರಹಣಂ ೧೫

ಮೃದುಗತಿವಿಲೋಲಹಾರರ್
ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾ-
ಸ್ಪದನಂ ಹೋಮಾನಳನಂ
ಮುದುವಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್ ೧೬

ಕೆಂದಳಿರೇರಿದ ಮಾವಂ
ಬಂದ ವಸಂತದೊಳನಂಗನಂಗನೆಸಹಿತೆ-
ಳ್ತಂದು ಬಲವಂದು ಮನ್ನಿಸು-
ವಂದದೆ ಬಲಗೊಂಡರಗ್ನಿಯಂ ದಂಪತಿಗಳ್ ೧೭

ಕಡುಮೋಳವುಳ್ಳವರ್ ಕಾ-
ಲ್ವಿಡಿವಿಡಿಯೆನೆ ಕುವರನೋಪಳೆಸೆವುಂಗುಟಮಂ
ಪಿಡಿದು ನಸುನಗುತುಮಾಕೆಯ
ಕಡುರಾಗದೆ ಸಪ್ತಪದಿಗಳಂ ಮೆಟ್ಟಿಸಿದಂ ೧೮

ನಿಟ್ಟೆಯ್ದೆಯಾಗು ಪತಿಯೊಳ್
ತೊಟ್ಟನುವಶೆಯಾಗು ಶೀಲವತಿಯಾಗು ಚಿರಂ
ನಿಟ್ಟಾಯುವಾಗು ನೀನೆಂ-
ದಿಟ್ಟರ್ ಸೇಸೆಯನಗಣ್ಯಪುಣ್ಯಾಂಗನೆಯರ್ ೧೯

ಅಣಚಿತನವಂ ಕೈಕೊಳ್ ನಿನ್ನೋಲೆಭಾಗ್ಯದ ಭದ್ರಲ-
ಕ್ಷಣದ ಪದದೊಳ್ ಸಂದೀ ಸೌಭಾಗ್ಯದಿಂ ಸ್ವಜನಂಗಳಂ
ತಣಿಸಿ ಪೃಥಿವೀರಾಜ್ಯಂಗೆಯ್ಯೆಂದು ತನ್ನೃಪಪುತ್ರಿಗಾ
ಕ್ಷಣದೊಳೊಸೆದಂಡೆಲ್ಲರ್ ಸೇಸಿಕ್ಕಿದರ್ ನೆರೆದೆಯ್ದೆಯರ್ ೨೦

ಕೊಂಕಿ ಕನಲ್ದು ತನ್ನನೆ ಪಳಂಚುವ ಕೇಕರಪಾತವೆಳ್ದ ರೋ-
ಮಾಂಕುರಮುಣ್ಮಿ ಪೊಣ್ಮುವ ಭಯಂ ನಮಿತಾನನಪದ್ಮರಾಗದಿಂ-
ದಂ ಕರೆಗಣ್ಮಿ ಸೂಸುವ ಬೆಮರ್ ತಲೆದೋರುವ ಲಜ್ಜೆ ನಾಡೆ ಚೆ-
ಲ್ವಂ ಕುಡೆ ನೋಡುತಂಗನೆಯನೀಕ್ಷಿಸಿದಂ ನೃಪರೂಪಮನ್ಮಥಂ ೨೧

ನಸೆಯುಳಿಪಿಂ ಪ್ರಿಯಾನನಮನೀಕ್ಷಿಸಲುಜ್ಜುಗೆಯಾಗಿ ತಾನೆ ಲ-
ಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆರೆ ನೋಡಿ ಮತ್ತೆ ಮಾ-
ನಸದೊಳಗಿಟ್ಟು ತನ್ನ ಮಸುಖಾನುಭವಕ್ಕೆರೆಮುಚ್ಚಿ ಕಂಗಳಂ
ಪಸರಿಪ ಹೋಮಧೂಮಹತಿಗಂದು ಶಶಿಪ್ರಭೆ ದೂರನೇರಿಸಳ್ ೨೨

ರತಿಯೊಡನಿಂದ್ರನೆಂತು ನೆರೆದಂ ಶಚಿಯೊಳ್ ಸ್ಮರನೆಂತು ನಾಡೆ ಸಂ-
ಗತಿವಡೆದಂ ದಲೆಂದವಳ ರೂಪುಮನಾತನ ಲೀಲೆಯಂ ಮನ-
ಕ್ಕತಿಶಯಮಾಗೆ ಮತ್ತವಳ ಲೀಲೆಯನಾತನ ರೂಪುಮಂ ಜನ-
ಪ್ರತತಿ ಮರಲ್ದು ನೋಡಿದುದು ನಿಂದು ವಿವಾಹಗೃಹಾಂತರಾಳದೊಳ್ ೨೩

ಆಗಳಾ ವಿವಾಹಮಂಗಳಮಹೋತ್ಸವಮಹಾಮಹಿಮೆಯೊಳ್—

ಹಿತನುತಮಂತ್ರಿಮಂಡಳಿಕ ಮಿತ್ರ ಪುರೋಹಿತ ದಂಡನಾಯಕಾ-
ನ್ವಿತ ನಗರಪ್ರಧಾನವನಿತಾನಿಕರಕ್ಕೆ ಸುವರ್ಣಭಾಜನ-
ಪ್ರತತಿಗಳೊಳ್ ಕನನ್ಮಣಿಯ ಪೊಂಗಳ ಕೇಳಿಯ ಬಾಯಿನಂಗಳಂ-
ಸುತೆಯ ವಿವಾಹದುತ್ಸವದೊಳಿತ್ತುದು ತನ್ನರಪಾಂಗನಾಜನಂ ೨೪

ಹೃದಯದೊಳೆನ್ನವರ್ ಪೆರರವರ್ ಧನಿಕರ್ ಬಡವರ್ ಸಮಂತು ಬೇ-
ಡದವರಡುರ್ತು ಬೇಡಿದವರೆನ್ನದೆ ರನ್ನದ ಪೊನ್ನ ಚಿತ್ರವ-
ಸ್ತ್ರದ ಪೊಸವಚ್ಚದೊಟ್ಟಿಲನೆ ಕೋಶಗೃಹಂ ಬರಿದಾಗೆ ಕೊಟ್ಟು ಮಾ-
ಣದೆ ಮುಗುಳಾನೆಯುಂ ಕುದುರೆಯುಂ ಧರಣೀಪತಿ ಸೂರೆಬೀರಿದಂ ೨೫

# ಬಾಗಿಲು ತಡೆದದ್ದು

ಗಂಡಪೆಂಡಿರ ಪಟ್ಟಬಾಸಿಗ ಜೆಂಬಚ್ಚಿ
ದಂಡೆ ನಡುವಿನ ಚಿಂತಾಕು
ತೊಂಡಿಲು ರವಕೆ ಮುಂತಾದ ಕಿರಿದ ಸೆಳೆ-
ಕೊಂಡರೂಳಿಗವೆಂಗಳೊಳಗೆ ೧

ಹೋಗಲೆಂದವ ಹೊರಪಟಶಾಲೆಯೊಳು ಕೊಟ್ಟು
ರಾಗದಿಂದೊಳಗೆಯ್ದುವಾಗ
ಬೇಗ ಗಂಗಾದೇವಿ ಸಿಂಧುದೇವಿಯರೆಯ್ದಿ
ಬಾಗಿಲ ತಡೆದರರ್ತಿಯೊಳು ೨

ನಿಲ್ಲಣ್ಣ ನೀನೆಮ್ಮ ತವರುಮನೆಗೆ ಹೇಳ-
ದೆಲ್ಲಿಯು ಹೆಣ್ಣ ಕೈವಿಡಿದು
ಗೆಲ್ಲದಿ ಬರುತಿದ್ದೆ ನಮ್ಮೊಡನವರೀಗ
ಸೊಲ್ಲಿಸಿ ಬರಲೆಂದರೊಳಗೆ ೩

ಆರು ಹೆಣ್ಣೆ ನಿನ್ನ ಹೆಸರೇನು ನೀ ನಿಮ್ಮ
ಭೂರಿಕುಟುಂಬವ ಬಿಟ್ಟು
ಆರ ಹಿಂದೆಯ್ದಿದೆ ನಿನಗೀತನೇನಹ
ಕೋರಿ ಹೇಳೆಂದು ಕೇಳಿದರು ೪

ನಿನ್ನ ನೋಳ್ಪೊಡೆ ನಿನ್ನ ತವರು ಮನೆಗೆ ಬಂದ-
ರುನ್ನತಶಕ್ತಿಗಾಣಿಸಿದೆ
ಇನ್ನಿಲ್ಲಿ ತೋರೊಮ್ಮೆ ನೋಳ್ಪೆವೆಂದರು ಚಕ್ರಿ
ಮುನ್ನಾದುದೇನೆಂದು ಕೇಳ್ದ ೫

ನಿನಗೆ ತನ್ನುಂಗುರಗಳ ತಂದು ಕೊಡುವೆವೆಂ-
ದನುವಿಸಿ ನಾವು ಬಹಾಗ

ತೊನೆದೊಬ್ಬರೊಬ್ಬರನೊಂದೊಂದು ಕೈಯೊಳು-
ಬ್ಬಿನೊಳೀಕೆ ನಿಲಿಸಿದಳ್ತಿಗೆದು ೬

ಕುಳಿತೇಳದಿಬ್ಬರ ಬರಸೆಳೆದುಂಗುರ-
ಗಳ ಸೆಳೆಕೊಂಡಳಾಗೀಕೆ
ಬಲುಮೆಯನಿಲ್ಲಿ ತೋರಲಿಯೆಂದರದಕೆ ತ-
ನ್ನೊಳು ಮೆಚ್ಚಿ ನಕ್ಕನಾ ನೃಪತಿ ೭

ನುಡಿ ಹೆಣ್ಣೆಯೆಂಬರು ಸುಮ್ಮನಿಹಳು ನಮ್ಮ-
ನೊಡೆಹೊಯ್ದು ಹೋಗೆಂಬರದಕೆ
ಮುಡಿ ಬಾಗಿ ನಗುತಿಹಳಲ್ಲದಿದ್ದೊಡೆ ತಪ್ಪ-
ಕೊಡು ಬಿಡೆವೆಂದರು ಕೂಡೆ ೮

ನನ್ನೊಳಗಾದವರ್ಮಾಡಿದ ತಪ್ಪನು
ನನ್ನದೆಂದೆ ಕಾಣಿರಕ್ಕ
ಮನ್ನಿಸುವೆನು ನಾನು ನಿಮ್ಮನೆಂದನು ಚಕ್ರಿ
ಮನ್ನಣೆಯೇನೆಂದರವರು ೯

ರನ್ನ ಚಿನ್ನದಲಿ ಮಾಡಗಳು ನಿಮ್ಮಿರ್ವರ್ಗೆ
ಹೊನ್ನುಯ್ಯಲೊಬ್ಬರೊಬ್ಬರಿಗೆ
ಪನ್ನೆರಳ್ಕೋಟಿಗ್ರಾಮವನೀವೆ ಹಿಡಿಯಿರೌ
ರನ್ನ ಮುದ್ರಿಕೆಯನೆಂದಿತ್ತ ೧೦

ನಗುತೊಲ್ದು ಸ್ತ್ರೀಪುರುಷರು ಸುಖಬಾಳಿರೆಂ-
ದೊಗುಮಿಗೆ ಸೇಸೆಯನಿಟ್ಟು
ಜಗಕಗ್ರಗಣ್ಯನ ಸೋದರಿಯರು ಪೋದ-
ರಗಣಿತೈಶ್ವರ್ಯಲಾಭದೊಳು ೧೧

# ಹೆತ್ತವರ ಹಿತವಚನ—ಗಂಡಿಗೆ, ಹೆಣ್ಣಿಗೆ

— ೧ —

ರಾಜಾಧಿರಾಜನಳಿಯನ ಮೊಗಮಂ ನೋಡಿ—

ಬಗೆದುಂ ನಿನ್ನನ್ವಯೋನ್ನತಿಯನಿವಳತಿಸ್ನೇಹಸಂಬಂಧಮಂ ನೀಂ
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮರಿಯದೇನಾನುಮೊಂದಾಗಳುಂ ಮೆ-
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ-
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ ೧

ಎಂದು ನುಡಿದು ಲಕ್ಷ್ಮೀಮತಿಮಹಾದೇವಿಯುಂ ತಾನುಂ ಆತ್ಮೀಯ ಪ್ರಿಯಾತ್ಮಜೆಯ ಮೊಗಮನಳ್ಕರ್ತು ನೋಡಿ—

ಮನಮರಿದಂಜಿ ಬೆರ್ಚಿ ಬೆಸಕೆಯ್ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ-
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ-
ತ್ತನುಜೆಯುಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ೨

ಆಗಳ್ ವಜ್ರದಂತನನಂತಸಾಮಂತಾಂತಃಪುರಪರಿವಾರಂ ಬೆರಸು ಪೋಗಿ ಮಗಳುಮನಳಿಯನುಮಂ ಕಿರಿದಂತರಂಬರಂ ಕಳುಪಿ ಮಗುಳ್ವಾಗಳ್—

ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಳ್ವ ಕೈ-
ಯಿಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ ೩

— ೨ —

ಜಯವರ್ಮ ಮಂಡಲೇಶ್ವರಂ ಮಗಳುಮನಳಿಯನುಮಂ ಬಳಿಸಿ ಕುಳ್ಳಿರಿಸಿ—

ನಿನ್ನಯ ಕೂಟಮಂ ಬಯಸಿ ಪೆತ್ತವಳಿಂತುಮೊಡಂಬಡಂ ದಿಟಂ
ನಿನ್ನ ಮನಕ್ಕೆ ಮಾಡಳದು ದೈವಕೃತಂ ದೊರೆಕೊಂಡುದಪ್ಪೊಡಂ
ಮನ್ನಿಪುದೆಮ್ಮ ಕಾರಣದಿನಿತ್ತಣ ಪಂಬಲನೀಕೆ ಮಾಡದಂ
ತಿನ್ನಡೆಯಿಪ್ಪುದೊಂದೆ ತೆರನಪ್ಪುದಿದಂ ಸೆರಗೊಡ್ಡಿ ಬೇಡಿದೆಂ ೪

ಎಂದು ಕುಮಾರಂಗೆ ಪೇಳ್ದು ತಾನುಂ ಜಯಶ್ರೀ ಮಹಾದೇವಿಯುಂ ಶಶಿಪ್ರಭೆಯ ಮೊಗಮಂ ಪ್ರೇಮರಸವಿಸರಲುಳಿತ ಲೋಚನಂಗಳಿಂ ನೋಡಿ—

ಅಕ್ಕ ನಿಜಪ್ರಿಯಂಗೆ ಮನದನ್ನದೆ ನೀಂ ಬೆಸಕೆಯ್ವುದಾಗಳುಂ
ಮಕ್ಕಳ ಮಾಳ್ಕೆಯಿಂದಿರದೆ ನೀನೊಡವಂದ ಜನಕ್ಕೆ ಸಂತಸಂ
ಮೊಕ್ಕಳಮಾಗೆ ಮನ್ನಿಪುದು ಮಾವನ ಪೆರ್ಮಗಮತ್ತೆಯೊಲ್ಮೆಗಂ
ತಕ್ಕ ನೆಗಳ್ತೆಯಂ ನೆಗಳ್ವುದೀವುದು ಪೆತ್ತೆಮಗಂ ಪ್ರಮೋದಮಂ ೫

ಎಂದು ಬುದ್ಧಿವೇಳ್ದು ಶೇಷಾಕ್ಷತಮನಿಕ್ಕಿ ಮಂಗಳಮೃದಂಗರವ ಮೆಸೆಯೆ ಪುರಮಂ ಪೊರಮಟ್ಟು ಕಿರಿದಂತರಮಂ ಕಳುಪಿ ಮಗುಳ್ದರ್

ಪುಟ ೧ ರಿಂದ ೬೪.
ಬೆಂಗಳೂರಿನ ಬಿ. ಎಸ್. ಐಯಂಗಾರ್ ಮುದ್ರಿಸಿದರು.

# ಸಪ್ತಪದಿಯ ಗದ್ಯಾನುವಾದ

## ನಾಂದೀಮಂಗಲ

೧. ಶ್ರೀಮತ್ (ಸಂಪದ್ಯುಕ್ತವಾದ) ಅಮಲ (ಕೊಳೆಯಿಲ್ಲದ) ಗುಣಗಳಿಗೆ ನಿಧಿಯಾದವನಿಗೆ, ನಿತ್ಯ (ಶಾಶ್ವತನಾದವ)ನಿಗೆ, ನಿಸ್ಸೀಮ (ಮಿತಿಯಿಲ್ಲದೆ ಅಪಾರವಾದ) ಕೃಪಾ (ಗುಣಕ್ಕೆ) ವಾರಿಧಿ (ಸಮುದ್ರ) ಆದವನಿಗೆ, ರಾಮಣೀಯಕ (ಇಂದ್ರಿಯಗಳಿಗೂ ಮನಸ್ಸಿಗೂ ಚೈತನ್ಯಕ್ಕೂ ರಂಜನೆಯುಂಟುಮಾಡುವ) ರಾಶಿ ಆದವನಿಗೆ, (ಇಂಥ) ಪಶ್ಚಿಮರಂಗಧಾಮನಿಗೆ ನಾನು ಎರಗುವೆನು (ನಮಸ್ಕರಿಸುತ್ತೇನೆ.)

೨. ರಂಗಧಾಮನ ದಿವ್ಯವಾದ ಅಂಗಸಂಗತಿಯಿಂದ (ದೇಹದೊಡನೆ ಹೊಂದಿಕೊಂಡಿರುವ ಕಾರಣದಿಂದ) 'ಮಂಗಳದೇವತೆ' ಎನ್ನಿಸುವ ಆ ರಂಗ(ನಾಥನ) ಮಂದಿರಕ್ಕೆಮಂಗಳ(ಸ್ವರೂಪದ) ವೈಜಯಂತಿ (ವಿಜಯಪತಾಕೆ) ಆದವಳಿಗೆ, (ಇಂತಹ) ರಂಗನಾಯಕಿಗೆ ನಾನು ಎರಗುತ್ತೇನೆ.

೩. ಮಂಗಳವಾದ ಗುಣಗಳ ಗಣ(ಸಮೂಹ)ಕ್ಕೆ ನಿಧಿ (ಆದವನಿ)ಗೆ, ನಿರ್ಮಲನಿಗೆ, ಉತ್ತುಂಗ (ಎತ್ತರವಾದ, ಹೆಚ್ಚಾಗಿ ಬೆಳೆದ) ಮಹಿಮೆ ಉಳ್ಳವನಿಗೆ, ಮಾ(ಲಕ್ಷ್ಮಿ)ಗೆ) ಧವ (ಪತಿ) ಆದವನಿಗೆ, ಸಂಗತ(ತನ್ನೊಡನೆ ಹೊಂದಿಕೊಂಡ) ಜನ(ರಿಗೆ) ಸರ್ವಫಲ(ಗಳನ್ನು)ದ(ಕೊಡುವ)ಆವನಿಗೆ, (ಇಂತಹ) ಪಶ್ಚಿಮರಂಗಧಾಮನಿಗೆ ನಾನು ಎರಗುವೆನು.

೪. ಇಂಗೋಲನ (ಇನಿದಾದ ಕೋಲು ಎಂದರೆ ಹಿತವಾದ ಬಾಣ ಎಂದರೆ ಪುಷ್ಪಬಾಣ ಆದ ಮನ್ಮಥನ) ತಾಯಿ (ಆದವಳಿ)ಗೆ, ಇಂಗದಿರನ (ಇನಿದಾದ ಕದಿರು ಎಂದರೆ ತಂಪಾದ ಕಿರಣ, ಅದು ಉಳ್ಳವನಾದ ಚಂದ್ರನ) ತಂಗಿ (ಆದವಳಿ)ಗೆ, 'ಇಂದಿರೆ' (ಎಂದು ಹೆಸರಾದವಳಿ)ಗೆ, ರಂಗಧಾಮನ ರಾಣಿಯಾದವಳಿಗೆ, (ಹೀಗೆ) ರಾರಾಜಿಸುವ ರಂಗನಾಯಕಿಗೆ ಎರಗುತ್ತೇನೆ.

೫. ಶ್ರೀ, ಭೂಮಿ ಮತ್ತು ನೀಳಾ (ಎಂಬ ಮೂವರು ದೇವಿಯರ) ನಾಥನಿಗೆ, ಅನುಪಮ(ಅಸಮಾನ)ವಾದ ವೈಭವವುಳ್ಳ ವೈಕುಂಠಪತಿಗೆ,

ಸ್ವಾಭಾವಿಕ(ವಾದ) ಶುಭಗುಣ(ಗಳಿಗೆ) ನಿಧಿ (ಆದವನಿಗೆ), (ಇಂತಹ) ಅಂಬುಜನಾಭ(ಪದ್ಮನಾಭ)ನಿಗೆ ನಾನು ಎರಗುತ್ತೇನೆ

೬. ದೇವತೆಗಳು, ಮಾನವರು, ಮೃಗಗಳು, ನಗ(ಬೆಟ್ಟ)ಗಳು (ಮೊದಲಾದ ಸಮಸ್ತ ಚರಾಚರಗಳ) ರೂಪದ (ಆಕಾರದಲ್ಲಿ ಇರುವ) ವಾಸುದೇವನ ವಿಭವಗಳನ್ನು ಆ ವಿಧದ (ಅದೇ ರೀತಿಯಾದ) ಒಡಲ ಪೆತ್ತು (ದೇಹಗಳನ್ನು ಧರಿಸಿ), (ಪತಿಯನ್ನು) ಅನುಸರಿಸುವ ಲಕ್ಷ್ಮೀ ವಧುವಿಗೆ ವಂದಿಸುತ್ತೇನೆ.

೭. ನಂದ(ನೆಂಬ ಗೋಪಾಲನ) ಮೋಹದ ನಂದನ(ಮಗನಾದವನೆ), ಸನಕ ಸನಂದನ (ಮೊದಲಾದ ಋಷಿಗಳಿಂದ) ವಂದಿತ (ವಂದನೆಯನ್ನು ಕೊಳ್ಳುವ) ಚರಣ (ಕಾಲುಗಳುಳ್ಳವನೆ), ಮಂದರ(ವೆಂಬ ಪರ್ವತವನ್ನು) ಧರ(ಧರಿಸಿದವನೆ), ಮಾ(ಲಕ್ಷ್ಮಿಗೆ)ಧವ (ಪತಿಯಾದವನೆ), ಗೋವಿಂದ, ಮುಕುಂದ (ಎಂಬ) ದೇವನೆ, (ನೀನು) ನನ್ನನ್ನು ಸಲಹು

೮. ಎಂದೆಂದಿಗೂ ಇನಿಯ(ಪ್ರಿಯ)ನಲ್ಲಿ ಎರೆಹೊರೆ (ಭೇದ ಭಿನ್ನ) ಇಲ್ಲದ (ಹಾಗೆ) ಚೆಂದದಿಂದ (ಪತಿಯ) ಎರ್ದೆ(ಎದೆ)ಯಲ್ಲಿ ನಿಂತ ಇಂದು ಸೋದರಿಗೆ (ಚಂದ್ರನ ತಂಗಿಗೆ), ಇಂದೀವರ (ತಾವರೆಯಲ್ಲಿ) ಮಂದಿರಿ (ಮನೆ ಮಾಡಿಕೊಂಡವಳು) ಆದ ಇಂದಿರೆಗೆ ವಂದಿಸುವೆನು.

೯. ಅಮರ್ದು (ಅಮೃತವನ್ನು) ಕಡೆಯುವ ಸಮಯದಲ್ಲಿ, ಅಲ್ಲಿ ನೆರೆದಿದ್ದ ಅಮರರು (ದೇವತೆಗಳು) ಅಂತು (ಹಾಗೆ) ಅಚ್ಚರಿವಡೆಯೆ (ಆಶ್ಚರ್ಯವನ್ನು ಪಡೆಯುವಂತೆ) ಕಮಲೆ(ಲಕ್ಷ್ಮಿ)ಗೆ(ತನ್ನ) ಎದೆಯನ್ನು ಇಂಬುಗೊಳಿಸಿದ (ಅನುಕೂಲ ಮಾಡಿಕೊಟ್ಟ) ಪುರುಷೋತ್ತಮ(ನಾದ ನಾರಾಯಣ)ನ ಅಡಿ (ಕಾಲುಗಳ)ಗೆ ನಾನು ಎರಗುತ್ತೇನೆ.

೧೦. (ಸಮುದ್ರವನ್ನು) ಕಡೆಯುವುದನ್ನು (ಬಿಟ್ಟು) ಕಾದಿರುವ ಬಿಡುಗಣ್ಣರ (ಬಿಟ್ಟ ಕಣ್ಣಿನವರಾದ ದೇವತೆಗಳ) ಗಡಣ (ಸಮೂಹ)ವನ್ನು ಕಡೆಗಣಿಸಿ (ಅಲಕ್ಷ್ಯಮಾಡಿ), ಒಡನೆ(ಸಮುದ್ರದಿಂದ ಹುಟ್ಟಿದ ಕೂಡಲೆ) ನಾರಾಯಣನ ಉರವ (ಎದೆಯನ್ನು) ಸೇರಿದ ಸಿರಿ (ಶ್ರೀ ಎಂಬ) ಮಡದಿ (ವಿಷ್ಣುಪತ್ನಿ)ಯ ಅಡಿಗೆ ವಂದಿಸುವೆನು.

೧೧. ಆವನಿಗೆ (ಯಾವ ನಾರಾಯಣನಿಗೆ) ಇಳೆ(ಭೂಮಿ)ಯೂ

ಆಗಸ(ಆಕಾಶ)ವೂ ಅಳತೆಕೊಳ್ಳುವ ವೇಳೆಯಲ್ಲಿ ಅಡಿ(ಪಾದ)ಗಳಿಗೆ ಹಾವುಗೆ(ಪಾದರಕ್ಷೆ)ಗಳಂತೆ ಅಳವಟ್ಟು (ಹೊಂದಿಕೊಂಡು ಒಪ್ಪಿ) ತೋರಿದುವೋ—ಆ ದೇವನಿಗೆ ನಾನು ವಂದಿಸುವೆನು.

೧೨. ಶೌರಿ(ನಾರಾಯಣನು) ಆವಳಿಗಾಗಿ(ಯಾವ ಲಕ್ಷ್ಮಿಗೋಸ್ಕರ) ಕಡಲ(ಸಮುದ್ರದ) ಎಡೆಯಲ್ಲಿ ಮಲಗಿದನು, (ಯಾವಳಿಗಾಗಿ)ಕಡಲನ್ನು ಕಡೆದು ಬಳಲಿದನು, (ಯಾವಳಿಗಾಗಿ) ಕಡಲಿನಲ್ಲಿ ದಾರಿಯನ್ನು ಗೈದನು —ಆ ಸಿರಿ (ಶ್ರೀಯೆಂಬ) ಮಡದಿಯ ಅಡಿಗೆ ವಂದಿಸುವೆನು.

೧೩. ವಂದಾರು (ಆಶ್ರಿತರಾದ) ಜನಕ್ಕೆ ವಾಂಛಿತ (ಬಯಸಿದ) ಫಲ ಗಳನ್ನು ಈ(ಕೊಡು)ವ ಮಂದಾರತರು (ಕಲ್ಪವೃಕ್ಷಕ್ಕೆ ಸಮ) ಆದ ಮಾಧವನಿಗೆ, ಕುಂದುಗಳಿಲ್ಲದೆ ಗುಣ(ಕ್ಕೆ) ಅರುಗೊಂಡ (ಪ್ರೀತಿಯನ್ನು ಹೊಂದಿದ) ಮುಕುಂದನಿಗೆ ನಾನು ವಂದಿಸುವೆನು.

೧೪. ಪುರುಷೋತ್ತಮ(ನಾದ ನಾರಾಯಣ)ನ ಎದೆಯಲ್ಲಿ ಹುದುಗಿ (ಅಡಗಿ) ಇದ್ದು, ಅವನ ಇರವ (ಮನಸ್ಸಿನ ಸ್ಥಿತಿಯನ್ನು) ಅರಿತು (ತಿಳಿದು), ಎಲ್ಲ ಲೋಗ(ಲೋಕದಜನ)ರಲ್ಲಿ ತನ್ನ ಕರುಣೆಯೆಂಬ ಅಮೃತ ವನ್ನು ಕರೆಗಣ್ಮಿಸಿ (ಮಿತಿಮೀರಿ ತುಳುಕಿಸಿ) ಹರಿಸುವ ಶ್ರೀ(ಯೆಂಬ) ರಾಣಿಯ ಅಡಿ(ಕಾಲು)ಗಳನ್ನು ಸೇವಿಸುವೆನು.

೧೫. ಅಖಿಳ(ಎಲ್ಲಾ) ಚರವೂ ಅಚರವೂ ಯಾವನ ಇಚ್ಛೆಯಿಂದ ಆದಿಯಲ್ಲಿ ಅವತರಿಸಿ(ಹುಟ್ಟಿ)ತೋ, ಯಾವನಿಂದ ಒಳ್ಪನ್ನು (ಸುಸ್ಥಿತಿ ಯನ್ನು) ಪಡೆಯಿತೋ, (ಕಡೆಗೆ) ಯಾವನಲ್ಲಿ ಅಡಗುವುದೋ—ಆ (ಸೃಷ್ಟಿಸ್ಥಿತಿಸಂಹಾರಕ ಸ್ವರೂಪನಾದ) ವಿಷ್ಣುವಿಗೆ ನಾನು ಎರಗುವೆನು.

೧೬. ಶ್ರೀ ವಿಷ್ಣುವಿಗೆ ವಲ್ಲಭೆ(ಪ್ರಿಯೆ) ಎನ್ನಿಸಿ, ಸಕಲ ವೇದಗಳ ಆವಳಿ(ಪಂಕ್ತಿ)ಯಲ್ಲಿ ಜಸ(ಯಶಸ್ಸು) ಪಡೆದ ಪಾವನ(ಪವಿತ್ರ) ಚರಿತೆ (ನಡತೆಯುಳ್ಳವಳು) ಆದವಳನ್ನು, ಪದ್ಮದಲ್ಲಿ ಸದ್ಮೆ (ಮನೆಯುಳ್ಳವಳು) ಆದವಳನ್ನು, (ಇಂಥ) ಲಕ್ಷ್ಮೀ ಎಂಬ (ವಿಷ್ಣುವಿನ) ವನಿತೆ (ಪತ್ನಿ)ಯನ್ನು ವಂದಿಸುವೆನು.

೧೭. ಆವನ(ಯಾವಾತನ) ಆಣತಿ (ಆಜ್ಞೆ)ಯ ಊಳಿಗ(ಸೇವೆಯೋ) ಕರ್ಮಯೋಗ (ಎಂಬುದೋ), ಮತ್ತೆ ಆವನ ನೆನಹು (ಜ್ಞಾಪಕವೇ)

ವಿಜ್ಞಾನ (ಜ್ಞಾನಯೋಗ)ವೋ, ಯಾವನಲ್ಲಿ ಎರಕ (ಹೋಗಿ ಎರಗುವಿಕೆ, ಶರಣಾಗುವಿಕೆ), ಭಕುತಿ (ಭಕ್ತಿಯೋಗವೋ)—ಆ ಪರವಾಸುದೇವನಿಗೆ ನಾನು ಎರಗುವೆನು.

೧೫. ಜ್ಞಾನ, ವೈರಾಗ್ಯ, ಶ್ರೀ ಹರಿ(ಯಲ್ಲಿ) ಭಕ್ತಿ, ಸತ್ಕರ್ಮ (ಮುಂತಾದ್ದರಲ್ಲಿ) ಹೀನರಾದ ನಮ್ಮನ್ನು ಆರೈದು (ನೋಡಿ ಕಾಪಾಡಿ), ಆ ನಾರಾಯಣನ ಅಡಿಗೆ (ನಮ್ಮನ್ನು) ಎರಗಿಸುವ ಶ್ರೀ (ದೇವಿ)ಗೆ ಆನತಿಗೈದು (ಪ್ರೀತಿಯಿಂದ ತಗ್ಗಿನಡೆದು) ನಾನು ಬಾಳುವೆನು.

## ಶ್ರೀ ಪಾರ್ವತೀಪರಮೇಶ್ವರರ ವಿವಾಹ

ಆಗ ಹೊಸ ಮದವಣಿಗನೆನ್ನಿಸುವ ಶ್ರೀ ಹಂಪೆಯ ವಿರೂಪಾಕ್ಷನು (ಆ) ಸಮಯಕ್ಕೆ ಉಚಿತವಾದ ಅಮೃತ (ಸಿಹಿಯಾದ) ಅನ್ನವನ್ನು ಉಂಡು, ಮಧುಪರ್ಕವನ್ನು ಕೈಗೆ (ಎತ್ತಿ)ಕೊಂಡು—

೧. ಹರಿ ಅಜ (ವಿಷ್ಣು ಬ್ರಹ್ಮ ಇವರು) ಅನುಮಿಸುತುಂ (ಅನುಮತಿಯನ್ನು ಕೊಡುತ್ತ) ಇರಲು; 'ಎಲೆಲೆ! ಪರಮಶುಭಾಕರ (ಶುಭವನ್ನು ಉಂಟುಮಾಡುವ) ಮುಹೂರ್ತವು ಸಮೀಪ (ಆಯಿತು). ಕರುಣಿಪುದು (ದಯಮಾಡಿ ಬರಬೇಕು)' ಎನ್ನಲು; (ಆ) ಮಂಗಳವಾದ ವಾಕ್ (ಮಾತಿನ) ವಿರಚನೆಯನ್ನು ಕೇಳಿ, ರುದ್ರನು ಭೋಂಕನೆ ಎಳ್ದಂ (ಎದ್ದನು )

ಹಾಗೆ ಎದ್ದು ನಡೆದುಬಂದು, ವಿವಾಹಗೇಹ (ಮದುವೆಯ ಮನೆಯ) ಒಳಗೆ ಹೊಕ್ಕು—

೨. ಮುತ್ತೈದೆಯರ ಒತ್ತೊತ್ತೆಯಂ (ದಟ್ಟವಾದ ಗುಂಪನ್ನು) ಒತ್ತರಿಸುತ್ತಾ, ಬೆಳಕಿನಲ್ಲಿ ಹೊಸ ಬೆಳಕನ್ನು ಸೂಸು(ಚೆಲ್ಲು)ತ್ತಾ, (ಸುತ್ತಿನವರಿಗೆ) ಸವಿಯಾದ ನೋಟವನ್ನು ಈಯು(ಕೊಡು)ತ್ತಾ, ಶಿವನು ಜವನಿಕೆ(ತೆರೆ)ಯ ನೆಲೆ(ಇದ್ದ ಬಳಿ)ಗೆ ಎಯ್ತಂದಂ (ಹತ್ತಿರ ಬಂದನು.)

ಆ ಸಮಯದಲ್ಲಿ ಪಾರ್ವತೀದೇವಿ ನಿಟ್ಟೈದೆ (ನಿಷ್ಠೆಯುಳ್ಳ ಮುತ್ತೈದೆಯಾಗಲೆಂಬ ಶುಭಭಾವನೆಯಿಂದ ಹಾಕಿದ್ದ) ಮೆಟ್ಟಕ್ಕಿಯನ್ನು ಮೆಟ್ಟಿ, ತೆರೆಯನ್ನು ಮರೆ(ಯನ್ನಾಗಿ) ಕೊಂಡು ನಿಂದಿರುವಲ್ಲಿ—

೩. ನಲ್ಲ(ಪ್ರಿಯರಾದವ)ರ ನಡುವೆ ಉಪಚಾರವೂ ಸಲ್ಲಲಿತ (ಕೋಮಲ)ವಾದ ಈಕ್ಷಣ(ನೋಟ)ದ ನಡುವೆ ಪಕ್ಷ್ಮಪುಟ (ಮುದ್ದಾದ ಸಂಪುಟದಂಥ ರೆಪ್ಪೆ) ಅದೂ, ಸಂಫುಲ್ಲ (ಚೆನ್ನಾಗಿ ಅರಳಿದ) ರದ (ಹಲ್ಲುಗಳ) ಮಧ್ಯದಲ್ಲಿ ಮಿಗೆ (ಬೇಕಾದ ಹಾಗೆ) ಸೊಲ್ಲು (ಮಾತೂ) ಇರುವಂತೆ ಅಲ್ಲಿ (ಆ) ತೆರೆ ಹರನ ಇದಿರಲ್ಲಿ ಇದ್ದಿತು.

ಅಂತು (ಹಾಗೆ) ಇರುವ ಜವನಿಕೆ(ತೆರೆ)ಯನ್ನು ಅತಿ(ಯಾದ) ಸ್ನೇಹದಿಂದ ನೋಡಿ—

೪. ಬೆಳಕಿನ ಬೀಜಗಳ ಆವಳಿ(ಪಂಕ್ತಿ)ಯು ಒಬ್ಬುಳಿ(ರಾಶಿ)ಯೋ, ನಕ್ಷತ್ರ(ಗಳ) ರಾಶಿಯೋ, ನವ (ಹೊಸದಾದ) ಪುಣ್ಯಗಳ ಪುದುವೋ (ಮೊತ್ತವೋ), ಚಂದ್ರಿಕಾ (ಬೆಳುದಿಂಗಳಿಂದ ಮಾಡಿದ) ತಂಡುಲವೋ (ಅಕ್ಕಿಯೋ) ಎನೆ (ಎಂಬಂತೆ) ತೊಳಗಿ ತೋರುವ ಮೆಟ್ಟಕ್ಕಿಗಳನ್ನು—

೫. ಕಾಂತಿಮಯನಾದವನು, ಶಶಿ(ಚಂದ್ರನನ್ನು)ಚೂಡಂ(ತಲೆಯಲ್ಲಿ ಧರಿಸಿದವನು), ಶಾಂತನಾದವನು, ನವಭೋಗಿ(ಹೊಸದಾಗಿ ಮದುವೆಯ ಭೋಗವನ್ನು ಪಡೆವವನು) ಎನ್ನಿಸುವ ಲೀಲಾವಾಸನು (ಲೀಲೆಗೆ ಮನೆಯಾದವನು), ಸಂತಂ (ಯಾವಾಗಲೂ) ಸುರುಚಿರ (ಕಳೆಗುಂದದ) ಹರ್ಷಮಯನಾದವನು, (ಇಂಥ ಶಿವನು ಮೆಟ್ಟಕ್ಕಿಯನ್ನು) ತಡೆಯದೆ (ತಡಮಾಡದೆ) ಮೆಟ್ಟನಿಂತ ಸಮನಂತರದಲ್ಲಿ (ಆ ಕೂಡಲೆ)—

೬. ಹರಿಯೂ ಸರಸಿಜಭವ (ಬ್ರಹ್ಮ)ನೂ ಪುರುಹೂತ (ಇಂದ್ರ)ನೂ ಎಸೆವ (ಕಂಗೊಳಿಸುವ) ಋಷಿಗಳೂ (ಶಿವನ) ಗಣಕುಲವೂ ಗಿರಿಜೇಶನ ಗಿರಿಜೆಯ (ನಡುವೆ) ಭಾಸುರ (ಪ್ರಕಾಶಮಾನವಾಗಿದ್ದ) ಪರಿಧಾನದ (ಸುತ್ತಿನ ತೆರೆಯ) ಸಮೀಪದಲ್ಲಿ ನಿಂತಾಗ—

೭. ನಿರಾಕುಳಿತಮನಂ(ವ್ಯಾಕುಲವಿಲ್ಲದೆ ಹರ್ಷಚಿತ್ತನಾದ)ಬೃಹಸ್ಪತಿ (ಎಂಬ ದೇವಪುರೋಹಿತನು) ಕಳಕಳಮಂ (ಸುತ್ತಿನ ಮಾತಿನ ಗದ್ದಲವನ್ನು) ನಿವಾರಿಸು (ತಡೆಯು)ತ್ತಾ 'ಆಯುತವೇ ? (ಮುಹೂರ್ತ ಪ್ರಶಸ್ತವಾಗಿದೆಯೇ ?') ಎನ್ನಲು, 'ಆಯುತಂ (ಪ್ರಶಸ್ತವಾಗಿದೆ)' (ಎಂದು ಸಭೆಯವರು ಎಂದರು.) (ಪುನಃ ಬೃಹಸ್ಪತಿ) ಲಸತ್ (ಕಿವಿಗೆ ಕೇಳಿಸುವಂಥ) ಗಳಬಳಮಂ (ಜೋರಾದ ಗಂಟಲಿನ ಬಲವನ್ನು) ವಿಸರ್ಜಿಸುತುಂ

(ಎಲ್ಲಾ ಬಿಟ್ಟು) 'ಆಯತವೇ?' ಎನ್ನಲು, 'ಆಯತ!' (ಎಂದರು.) (ಮತ್ತೆ) 'ಸಮಾಯತಮೇ? (ಪ್ರಶಸ್ತ ತಾನೇ?'). ಎನ್ನಲು 'ಆಯತ!' (ಎಂದರು.) 'ಮನಂಗೊಳಿಪ ಮಹಾಮುಹೂರ್ತದಲ್ಲಿ ಆಯತವೇ?' ಎಂದರೆ, 'ತಪ್ಪದೆ (ಖಂಡಿತವಾಗಿಯೂ) ಆಯತ (ಮುಹೂರ್ತ ಪ್ರಶಸ್ತ ವಾಗಿದೆ!' ಎಂದರು )

(ಹೀಗೆ) ಎಂಬ ಸಮಯದಲ್ಲಿ—

೮ ಅಮರ (ದೇವತೆಗಳಿಗೆ) (ಗುರು)ವಾದ ಬೃಹಸ್ಪತಿಯು, ಸಕಲ ವಾದ ವೇದಾಗಮಗಳಲ್ಲಿ ಕೋವಿದ (ಪಂಡಿತನಾದವನು), ಒಲಿದು (ವಿಶ್ವಾಸದಿಂದ) ಭಕ್ತಿಯಿಂದಲೂ 'ಪುಣ್ಯಾಹ' ಎನ್ನುತ್ತ (ಇರಲಾಗಿ); ಇತ್ತ ರಾಜತ್ (ಪ್ರಶಸ್ತವಾದ) ಸುಮುಹೂರ್ತವು ಬಂದು (ನಡುವಿನ) ತೆರೆಯನ್ನು ಓಸರಿಸಿದ (ಒಂದು ಪಕ್ಕಕ್ಕೆ ತಳ್ಳಿದ) ಕೂಡಲೆ—

೯. ಕರಡೆ (ವಾದ್ಯ)ಗಳ ರವವೂ ನಿಸ್ಸಾಳ (ತಂಬಟೆ)ಗಳ ರವವೂ ಭೇರೀರವವೂ ಮೃದಂಗಗಳ ರವವೂ ದೇವರುಗಳು (ಕರೆದ) ಹೂಮಳೆ ಗಳ ಭೋರೆಂಬ ರವವೂ (ಇನ್ನಿತರ) ಮಂಗಳವಾದ ರವವೂ ಆಗ ಉಣ್ಮಿ ದುವು (ಉಂಟಾದುವು )

೧೦. 'ಆನ್ ಇರೆ (ನಾನು ಇರುವಾಗ) ಜಡೆಯಲ್ಲಿ ಮತ್ತೊಬ್ಬಳು ತಾನು ಇರುವಳು ಗಡ(ಅಲ್ಲವೆ!)' ಎನುತ್ತಾ ಮುಳಿದು(ಕೋಪಗೊಂಡು) ಇಡು(ಎಸೆಯು)ವಂತೆ ಆ ಮಾನಿನಿ (ಮಾನಿಷ್ಠೆಯಾದ ಪಾರ್ವತಿ) ಜೀರಿಗೆ-ಬೆಲ್ಲವನ್ನು ಆನುತೆ (ಕೈತುಂಬ ತುಂಬಿಕೊಂಡು) ಶಿವನ ಉತ್ತ ಮಾಂಗಮಂ (ಶಿರಸ್ಸನ್ನು) ಪದೆದು (ಮನಃಪೂರ್ತಿಯಾಗಿ) ಇಟ್ಟಳ್ (ಗುರಿಮಾಡಿ ಹೊಡೆದಳು.)

೧೧. ಆಗ ವೃಡ(ಶಿವ)ನು ಗಿರಿಜೆಯ ಚೆಲ್ವು ಇಡಿದ (ತುಂಬಿದ) ಮುಖವನ್ನು ಕಂಡು, ಸಾತ್ವಿಕ(ಪ್ರೇಮಾನುರಾಗ)ವನ್ನು ಕೈಕೊಂಡು, ಒಲಿದು (ಪ್ರೀತಿಯಿಂದ) ಇಡು (ಎಸೆಯು)ವ ಆ ಜೀರಿಗೆ-ಬೆಲ್ಲವು ಕಂಪ ನದೆ (ಅನುರಾಗದ ನಡುಕದಿಂದ) ಸಡಿಲಿ, ಅಗಜೆ(ಪಾರ್ವತಿ)ಯ ಪಾದ ಗಳಲ್ಲಿ ಬಿದ್ದುವು.

ಅನಂತರದಲ್ಲಿ—

೧೨. 'ಪಲಕಾಲದೊಳ್ (ಹಲವು ಕಾಲದಿಂದಲೂ) ಉರೆ (ಬಹಳವಾಗಿ) ನಿನ್ನನ್ನು ಅರಸುತ್ತೆ ಇರೆ (ಹುಡುಕಾಡುತ್ತಾ ಇದ್ದರೆ,) (ಈಗ ನೀನು ಸಿಕ್ಕಿದೆ !)' ಎನ್ನುತ್ತಾ ಶಿವನ ಮುಕುಟ(ದಲ್ಲಿದ್ದ) ಇಂದುಗೆ(ಚಂದ್ರನಿಗೆ) ತಾನು ತುರುಗಿದ (ಒತ್ತಾಗಿ ತುಂಬಿದ) ತಾರಗೆ(ನಕ್ಷತ್ರ)ಎಂಬ ಆ ತೆರದಿಂದ ಆಗಜೆ(ಪಾರ್ವತಿ)ಯು (ಶಿವನ) ಶಿರದಲ್ಲಿ ತಂಡುಲಮಂ (ಅಕ್ಕಿಯನ್ನು) ಸುರಿದಳು.

ಆಗ—

೧೩. ಪರಮತಪೋನಿಧಿ ಎನ್ನಿಸಿದ ಗಿರಿಜೆಗೆ ಪುಣ್ಯಾಂಬುವಿಂದೆ(ಪವಿತ್ರವಾದ ನೀರಿನಿಂದ) ಆಭಿಷೇಕವನ್ನು ಒಪ್ಪಿರೆ (ಒಪ್ಪುವಂತೆ) ಮಾಡುವ ತೆರದಿಂದ ಶಂಕರನು ಅಮಲಿನ (ಸ್ವಚ್ಛ)ವಾದ ತಂಡುಲ(ಅಕ್ಕಿ)ಗಳನ್ನು ತವೆ (ಸಾಕು ಎನ್ನುವ ಮಟ್ಟಿಗೆ, ತಲೆಯ ಮೇಲೆ) ಸುರಿದನು.

ಆ ಸಮಯದಲ್ಲಿ—

೧೪. (ಪಾರ್ವತಿಯ ತಂದೆಯಾದ) ಗಿರಿಪತಿ (ಹಿಮವಂತನು) ಒಲವಿನಿಂದ ನಲಿನಲಿದು ಬಂದು, "ಗಿರಿಜೆ ಸಹಿತವಾಗಿ ನಾವೆಲ್ಲರೂ ನಿಮಗೆ ನೆಲೆದೊಳ್ತಿರ್ (ಅಚಲರಾದ ದಾಸದಾಸಿಯರು), ಬಳಿದೊಳ್ತಿರ್ (ನಿಮ್ಮನ್ನು ಅನುಸರಿಸುವ ದಾಸದಾಸಿಯರು), ಸಲೆದೊಳ್ತಿರ್ (ನಿಮಗೆ ಒಪ್ಪುವ ದಾಸದಾಸಿಯರು)" ಎನ್ನುತ್ತಾ ಧಾರೆಯನ್ನು ಎರೆದನು.

೧೫. "ಹರನೆ, ಗಿರಿಜಾತೆಯ ಸಕಲ ಗುಣಗಳೂ ನಿಮ್ಮನ್ನು ಈ ತೆರದೊಳ್ (ರೀತಿಯಾಗಿ) ಸುತ್ತುಗೆ (ಸುತ್ತಲಿ) ಎಂಬ ಹಾಗೆ ಒಪ್ಪಿರೆ (ಹೊಂದಿ ತೋರುವಂತೆ) ಅತಿ ಮೃದುತರವಾದ, ಸುರುಚಿರವಾದ, ನವ (ಹೊಸ) ಕಾಂತಿ(ಯಿಂದ) ಎಸೆವ (ಪ್ರಕಾಶಿಸುವ) ಗುಣಮಂ (ನೂಲನ್ನು) ಗುಣಮಂ (ಅನೇಕ ಬಾರಿ) ಸುತ್ತಿದರು.

೧೬. ಪತಿವ್ರತೆಯರು ಐದುಂವದನನ (ಪಂಚಮುಖನಾದ ಈಶ್ವರನ) ಕಾಂತೆಯನ್ನು ಅಧಿಕತರವಾದ ಮುದ(ಸಂತೋಷ)ದಿಂದ ಐದಿ (ಸಮೀಪಿಸಿ), "ಮುತ್ತೈದೆಯೆ, ನೆರೆಯೈದೆಯೆ, ಸಲೆಯೈದೆಯೆ, ನಿಟ್ಟೈದೆಯೆ (ಆಗಿ ಬಾಳು !)" ಎಂದು ಹರಸುತ್ತಿದ್ದರು.

ಹೀಗೆ ವಿವಾಹದ ವಿಭ್ರಮವನ್ನು ಕೈಕೊಂಡು, ಗಿರಿಜೆಯ ಕರತಳಮಂ

(ಅಂಗೈಯನ್ನು) ಹಿಡಿದು, ಸೋಮಧರ (ಚಂದ್ರನನ್ನು ಧರಿಸಿದವ)ನೂ ವ್ಯೋಮಶಿಖ (ಗಗನವನ್ನು ತಲೆಗೂದಲಾಗಿ ಉಳ್ಳವ)ನೂ (ಆದ ಶಿವನು) ಹೋಮ(ಮಾಡುವ) ಸ್ಥಳಕ್ಕೆ ನಡೆತಂದು (ನಡೆದುಬಂದು), ಇಕ್ಕಿದ ಹಸೆಯ ಮೇಲೆ ಪಶುಪತಿ ಕುಳ್ಳಿರಲು; ಮಂತ್ರ ತಂತ್ರ ಯಂತ್ರ (ಗಳಲ್ಲಿ) ಸಿದ್ಧನಾದ ಪರಮೇಷ್ಠಿ (ಬ್ರಹ್ಮನು) ಹರನ ಅನುಜ್ಞೆಯಿಂದ ಸ್ಥಂಡಿಲ (ಹೋಮಕಾರ್ಯಕ್ಕಾಗಿ ಶುದ್ಧಮಾಡಿದ ನೆಲ)ವನ್ನು ಅಲಂಕರಿಸಿ, ಮೆಲ್ಲಮೆಲ್ಲನೆ ಉಲ್ಲೇಖನಂಗೆಯ್ದು (ಬರೆದು), ಅಗ್ನಿಯನ್ನು ಪ್ರತಿಷ್ಠೆ ಮಾಡಿ, ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರು ಇವರುಗಳ ಅನುಮತದಿಂ (ಒಪ್ಪಿಗೆಯಿಂದ) ಪ್ರಾಣಾಯಾಮವನ್ನು ಮಂತ್ರಿಸಿ; ಸಮಿತ್ತು (ಸವುದೆ), ಪರಿಸ್ತರಣ (ಹಾಸುವ ದರ್ಭೆ), ಪಾತ್ರಾಸಾಧನ (ಪಾತ್ರೆಗಳನ್ನು ಸಜ್ಜು ಗೊಳಿಸುವುದು), ಆಜ್ಯ ಸಂಸ್ಕಾರ (ತುಪ್ಪವನ್ನು ಶುದ್ಧಿ ಮಾಡಿಕೊಳ್ಳು ವುದು), ಸ್ರುಕ್‌ಸ್ರುವ ಸಮ್ಮಾರ್ಜನ (ಮರದ ಸವುಟುಗಳನ್ನು ತೊಳೆಯು ವುದು), ದೂರ್ವಾ ಯುವ ಹಸ್ತಬಂಧನ ಮೊದಲಾದ ಸತ್‌ಕ್ರಿಯೆಗಳಿಂದ ಹೋಮವನ್ನು ಮಾಡುತ್ತಿದ್ದು—

೧೭. ಮಂತ್ರಾವಳಿಯಿಂದ (ಅಗ್ನಿಯನ್ನು) ಭಾವಿಸಿ, (ಆ ಅಗ್ನಿಯನ್ನು) ಓವುತೆ (ಕಾಪಾಡುತ್ತ) ಹುತವಹನೊಳ್ (ಬೆಂಕಿಯಲ್ಲಿ) ಎಸೆವ ಲಾಜಾ ಹುತಿಯಂ (ಅರಳಿನ ಹೋಮವನ್ನು) ತೀವಿದರ್ (ತುಂಬಿದರು.) ಅನಂತರಂ (ಲಾಜಹೋಮವಾದ ಮೇಲೆ) ಅಗಸುತೆ (ಪರ್ವತರಾಜನ ಮಗಳು) ದೇವ(ಶಿವ)ನ ಬಲ ಭಾಗದಿಂದ ಅನೂನಂ (ಚೆನ್ನಾಗಿ) ಎಡ ಭಾಗಕ್ಕೆ ಬಂದಳು.

ಹಾಗೆ (ಬಲದಿಂದ ಎಡಕ್ಕೆ) ಬರಲು, ಪೂರ್ಣಾಹುತಿಯನ್ನು ಕೊಟ್ಟು, ಹೋಮ ಸಮಾಪ್ತಿಯಾಗಲು; ಆಪ್ತನಾದ ಕಮಲಜ (ಬ್ರಹ್ಮ)ನು ಸಪ್ತಪದಿಯನ್ನು ಕಟ್ಟೆಳ್ಕರಿಂ (ಗಾಢವಾದ ಪ್ರೀತಿಯಿಂದ) ಮೆಟ್ಟಿ ಸಲು; ತದನಂತರಂ (ಅದಾದ ಮೇಲೆ) ಶೈಲಾಜಾಪರಂ (ಪರ್ವತನ ಪುತ್ರಿಯ ಪತಿಯು) ನಂದೀಶ್ವರ ವೀರಭದ್ರ ಆದಿ (ಮೊದಲಾದ) ಗಣ ಗಳೂ ಹರಿ ವಿರಿಂಚಿ (ಬ್ರಹ್ಮ) ಪುರಂದರ (ಇಂದ್ರ) ಆದಿ (ಮೊದಲಾದ) ಸಮಸ್ತ ಸುರ (ದೇವ) ಸಮೂಹವೂ ಸಪಂಕ್ತಿ (ಜೊತೆಜೊತೆಯಲ್ಲೆ)

ಕುಳ್ಳಿರಲು; ಪಾರ್ವತಿಯೊಡನೆ ಅಮೃತದ ಅನ್ನವನ್ನು ಆರೋಗಿಸಿ (ಊಟಮಾಡಿ); ಕೈಘಟ್ಟ (ಪರಿಮಳದ್ರವ್ಯದ ಉಂಡೆಯನ್ನು) ಕೊಂಡು, ತಾಂಬೂಲವನ್ನು ಆದರದಿಂದ ಸೇವಿಸುತ್ತ; ಅಂತಿಂತು (ಹಾಗೂ ಹೀಗೂ) ಚತುರ್ಥಿಯಂ (ನಾಲ್ಕನೆಯ ದಿವಸವನ್ನು) ಕಳೆದು; ಸಾಕಾರ ನಿಧಿ(ಯಾದ ಶಂಕರನು) ಓಕುಳಿಯಾಡಿ, ಗಿರಿರಾಜನಿಗೆ ಕರುಣಿಸುತ್ತಾ, ಮೇನಾದೇವಿ (ಪಾರ್ವತಿಯ ತಾಯಿ)ಯನ್ನು ಮನ್ನಿಸುತ್ತಾ, ಗಿರಿಜೆ ಯನ್ನು ಆಲಿಂಗಿಸುತ್ತಾ, ವೃಷಭನನ್ನು ಸಮಾರೂಢಂ (ಚೆನ್ನಾಗಿ ಹತ್ತಿ ಕುಳಿತ) ಬಾಲೇಂದುಮೌಳಿ (ಎಳೆಯ ಚಂದ್ರನನ್ನು ಶಿರದಲ್ಲಿ ಉಳ್ಳ ಶಿವನು) ಕೈಲಾಸಕ್ಕೆ ಅಭಿಮುಖನಾಗಿ ನಡೆದು ಬಂದು, ಕೈಲಾ ಸದ ಅರಮನೆಯನ್ನು ಒಳಹೊಕ್ಕು ಬಂದಾಗ—

೧೮. ರುದ್ರಗಣಿಕೆ(ಕನ್ಯಕೆ)ಯರ ನಿಕರ (ಗುಂಪು) ಆರತಿಯನ್ನು ಎತ್ತಲು, ಸರಸೀಜ(ಪದ್ಮ)ನಾಭನೂ ವಾರಿಜಪುತ್ರ (ಬ್ರಹ್ಮ)ನೂ ಹೊಗಳಲು, ದೇವಗಣಾವಳಿಯು ಅಕ್ಕರ್ (ಪ್ರೀತಿ)ಇಂದ ಕೈವಾರಿಸೆ (ಹೊಗಳಲು), ತಾರಗಿರೀಂದ್ರನಾಥನ್ (ಬೆಳ್ಳಿಯ ಬೆಟ್ಟಕ್ಕೆ ಒಡೆಯನಾದ ಶಿವನು) ನಂದಿಯಿಂದ ಇಳಿದು, ಅದ್ರಿಸುತಾಸಮನ್ವಿತಂ (ಪರ್ವತರಾಜ ಪುತ್ರಿಯ ಸಮೇತನಾಗಿ) ಸನ್ನುತವಾದ ಸಿಂಹಪೀಠವನ್ನು ಒಸೆದು (ಪ್ರೀತಿ ಯಿಂದ) ಏರಿದನು.

## ಶ್ರೀ ಸೀತಾರಾಮರ ವಿವಾಹ

ಆಗ ಆ ಪುಣ್ಯವನ್ನು ಆವಹ (ತರುವಂಥ) ಸಮಯದಲ್ಲಿ ಜಾನಕೀ ದೇವಿ—

೧. ಹಂಸೆಗೆ ಈ ನಡೆಯ (ನಡೆಯುವ ರೀತಿಯು) ಚೆಲುವು ಆವೆಡೆ (ಎಲ್ಲಿ ಇದೆ?) ಎನ್ನುವಂತೆ; ನೂಪುರದ (ಕಾಲುಗೆಜ್ಜೆಯ) ಇಂಚರಂ (ಇಂಪಾದ ಸ್ವರವು) ಸ್ಮರಂ (ಮನ್ಮಥನು) ಜೇವೊಡೆದ (ಧನುಸ್ಸನ್ನು ಟಂಕಾರಮಾಡಿದ) ಅಂದಮಾಗೆ (ಆದರಹಾಗೆ ಆಗಲು); ಮೃದು(ವಾದ) ಪಾದತಳ (ಅಂಗಾಲು)ಗಳ ಕೆಂಪು (ನೆಲದಲ್ಲಿ) ಕೂಡಿದರೆ, ಕೆಂಪಾದ ತಾವರೆಯ ಹೂಗಳನ್ನು ಕೆದರುವ ಹಾಗಿರಲು; ಕುಂತಳ(ತಲೆಗೂದಲಿನ)

ಸೌರಭಕ್ಕೆ (ಪರಿಮಳಕ್ಕೆ) ಭೃಂಗ (ದುಂಬಿಗಳ) ಆವಳಿ (ಸಮೂಹವು) (ತಲೆಯ)ಮೇಲೆ ಪೀಲಿ (ನವಿಲುಗರಿಯು) ತಳೆ(ಛತ್ರಿ)ಯಂತೆ ಇರಲು; ಆದೊಂದು ಲೀಲೆಯಿಂದ ಬಂದಳು.

೨ ರತಿಯು ಅಂಗಜಂಗೆ (ಮನ್ಮಥನಿಗೆ) ಅಲರ್ ಕಣೆಯಂ (ಹೂವಿನ ಬಾಣವನ್ನು) ಈಯ(ಕೊಡ)ಲೆಂದು ಬರುವ ಮಾಳ್ಕೆ(ರೀತಿ)ಯಿಂದ ಆ ಲಲಿತಾಂಗಿ (ಕೋಮಲವಾದ ದೇಹವುಳ್ಳ ಜಾನಕಿ) ಮಾಲೆಯನ್ನು ಹಿಡಿದು, ದಾಶರಥಿಯ (ದಶರಥನ ಮಗನ) ಕಣ್ಣಿಗೂ ಕೆಲಕ್ಕಂ (ಸಮೀಪಕ್ಕೂ) ಬಗೆಗಂ (ಮನಸ್ಸಿಗೂ) ಬಂದಳು.

ಹಾಗೆ ಬಂದು—

೩. ಮಾಲೆಯ ಮೇಲೆ ತುಂಬಿಗಳ ಮಾಲೆ ತೆರಂ (ಚಿತ್ರವಿಚಿತ್ರವಾಗಿ) ಹೊಳೆದಾಡಲು, ಕೇಕರ (ಕಡೆಗಣ್ಣಿನ ನೋಟದ) ಮಾಲೆ ಬೇರೆ ಹೂಮಾಲೆಯ ಲೀಲೆಯನ್ನು ಕೆದರಲು, ನೀಳ್ದ (ಉದ್ದವಾದ) ಬಾಹುಲತೆ (ಬಳ್ಳಿಯಂತಿರುವ ತೋಳು) ಶಿರೀಷ(ವೆಂಬ ಕೋಮಲವಾದ ಹೂವಿನ) ಮಾಲೆಯನ್ನು ಸೋಲಿಸಲು, ತೋಳ ಮೊದಲ್ (ಕಂಕುಳು) ಮದನಾನುರಾಗವನ್ನು ಸಾಲಿಡುವಂತೆ ಸೀತೆ ಸಾರ್ದು(ಹತ್ತಿರಬಂದು) ರಘುವಂಶಕ್ಕೆ ನಮೇರು (ಕಲ್ಪವೃಕ್ಷವಾದ ರಾಮನಿ)ಗೆ ಮಾಲೆಯನ್ನು ಸೂಡಿದಳು (ಧರಿಯಿಸಿದಳು)

೪. ವೈದೇಹಿ ರಾಮನಿಗೆ ತನಿ (ತಂಪಾದ) ಸೋಂಕಿನಿಂದ (ರಾಮನ) ಮೈಗೆ ರೋಮಾಂಚವನ್ನು ಒದವಿಸಿ (ಉಂಟುಮಾಡಿ), ಅಳ್ಕರಿಂ (ಪ್ರೀತಿಯಿಂದ) ನೀರೇಜ (ತಾವರೆಯ) ನಿಸರ್ಗ (ಸಹಜವಾದ) ಆಮೋದ (ಪರಿಮಳವಿರುವ) ಗಂಧೋದಕದ ಸವನ(ಅಭಿಷೇಕ)ವನ್ನು ಇತ್ತು (ಕೊಟ್ಟು), ಬಾಹುಮೂಲವೂ ಸ್ತನಮೂಲವೂ ನಾಭಿಮೂಲವೂ ತ್ರಿಗುಣಿಸುವಂತೆ ಸುಮನಸ್ ಶೇಖರಂ ಮಾಡಿ (ಹೆಗಲಿನಿಂದ ಎದೆಯಮೇಲೆ ಹಾಯ್ದು, ಹೊಕ್ಕುಳವರೆಗೆ ಬರುವಂಥ ಹಾರವನ್ನು ಹಾಕಿ), ಕಂದರ್ಪನ (ಮನ್ಮಥನ) ವಾಮಉಪಾಂತ(ಎಡದಪಕ್ಕ)ದಲ್ಲಿ ರಂಜಿಸುವ ರತಿಯ ಸೌಂದರ್ಯವನ್ನು ಸೂರೆಗೊಂಡಳು.

ಅನಂತರ ಸಕಲ ಮಂಗಲದ್ರವ್ಯ(ಗಳಿಂದ) ಸಂಸೇವ್ಯಮಾನ (ತುಂಬಿ

ಕೊಂಡಿರುವ) ಮಣಿ (ರತ್ನಗಳ) ವೇದಿಕಾ (ಜಗುಲಿಯ) ಮಧ್ಯ(ದಲ್ಲಿದ್ದ
ವಿಶಾಲ(ವಾದ) ಕಲಧೌತ (ಚಿನ್ನದ) ಪೀಠದಲ್ಲಿ ರತಿಯೂ ರತಿಪತಿಯು
ಇರುವ ಹಾಗೆ (ಆ) ದಂಪತಿಗಳು ಇದ್ದರು. ಆ ಸಮಯದಲ್ಲಿ, ಜನಕನ
ಅಭಿಜನ (ಇಷ್ಟರಾದವರು) ಸನಾಭಿಜನ (ಬಂಧು ಬಾಂಧವರು ಇವರೊ
ಡನೆ) ಸಮನ್ವಿತಂ (ಕೂಡಿದವನಾಗಿ), ಗಣಕ (ಜೋಯಿಸರ) ಗಣ
ಪುನಃಪುನಃ ಉಚ್ಚರಿಸುವ ಪುಣ್ಯಾಹದ ಪ್ರಶಸ್ತವಾದ ರವದೊಡ
ಅಗಣ್ಯ (ಲೆಕ್ಕವಿಲ್ಲದ) ಪುಣ್ಯಪಣ್ಯಾಂಗನಾ (ವಾರಸ್ತ್ರೀ) ಜನದ ಆಶಿ
ರ್ವಾದನಾದ ಒದವೆಯುಂ (ಒದಗಲು), ಮಾಂಗಲ್ಯ ಗೀತದ ಮಧು
ವಾದ ಧ್ವನಿಗಳೊಡನೆ ಮಂಗಳವನ್ನು ಪಾಠಕ(ಪಠನಮಾಡುವವ)
ಪಠನ (ಹೇಳುವ) ಧ್ವನಿಗಳು ಉಣ್ಮಿಪೊಣ್ಮಿಯುಂ (ಉಕ್ಕಿಪ್ರವಹಿಸಲು)
ರಘುಕುಲದ ರಾಜಭವನಕ್ಕೆ ಕಲಶವನ್ನು ಉದ್ಧರಣ (ಮೇಲೆ ಎತ್ತು
ತ್ತಿದ್ದಾರೆ) ಎನ್ನಿಸಿ, ಶುಚಿಯಾದ ಸುರಭಿಸಲಿಲ(ಗಂಧೋದಕ)ದಿಂ
ಪೂರ್ಣ (ತುಂಬಿದ) ಸುವರ್ಣ (ಚಿನ್ನದ) ಕಲಶವನ್ನು ಎತ್ತಿ—

೫. ಜಗತೀ (ಭೂಲೋಕದಲ್ಲಿ) ಜಂಗಮ (ನಡೆದಾಡುವ) ಕಲ್ಪ
ವೃಕ್ಷವು, ಇದೋ, ಕೈವಂದತ್ತು (ಫಲಭರಿತವಾಯಿತು) ಎನ್ನುವಂತೆ
ಭೂಪಂ (ಜನಕರಾಜನು ತನ್ನ) ಬಾಹುಗಳೆಂಬ ಶಾಖೆಗಳಲ್ಲಿ ಹೊನ್ನಿ
ಕಲಶವು (ನೋಟಕರ) ಮನಸ್ಸನ್ನು ಕೊಳಿಸೆ (ಆಕರ್ಷಿಸಲು); ತನ್ನ
ಸಂತಾನದ ವೃದ್ಧಿಗೆ ಹೊಯ್‌ನೀರನ್ನು ಎರೆಯುವಂತೆ, ಹರ್ಷದ ಪುಳ
(ರೋಮಾಂಚ)ವು ಕೈಗಣ್ಮೆ(ಮಿತಿಮೀರಲು), ಹರ್ಷದ ಅಶ್ರು(ಕಣ್ಣೀರು
ಕೈಮಿಗೆ (ಅಧಿಕವಾಗಲು), ಮಾಂಗಲ್ಯ (ಮಂಗಲಕಾಲದ) ತೂರ್ಯ
(ವಾದ್ಯಗಳ) ಸ್ವನಂ (ಧ್ವನಿಯು) ದೆಸೆಯಂ (ದಿಕ್ಕುಗಳನ್ನು) ಪಳಂಚಿ
(ಹೋಗಿ ತಾಗಲು), ಕೈಗೆ (ಧಾರೆಯ) ನೀರನ್ನು ಎರೆದನು.

ಹಾಗೆ ಪಾಣಿಗ್ರಹಣವನ್ನು ಮಾಡಿಸಲಾಗಿ—

೬. ಬಲ(ಬಲಭದ್ರನೆಂಬ ರಾಮ)ನ ಕರತಳಂ (ಅಂಗೈ) (ಜಾನಕಿ
ಯಾದ ತನ್ನ) ಕೆಂದಳ(ಕೆಂಪಾದ ಅಂಗೈ)ಯನ್ನು ಸೋಂಕಿದರೆ—ತೆಂಕಣ
(ದಕ್ಷಿಣ ದಿಕ್ಕಿನ) ಗಾಳಿಯ ಸೋಂಕಿನಲ್ಲಿ ಅಂಕುರಿಸಿದ (ಚಿಗುರುಬಿಟ್ಟ)
ಚೂತಲತೆ(ಮಾವಿನಬಳ್ಳಿ)ಯ ಹಾಗೆ—ಜಾನಕಿಯ ತನು(ದೇಹವೆಂಬ)

ಲತೆ(ಬಳ್ಳಿ)ಯಲ್ಲಿ ಪುಳಕ(ರೋಮಾಂಚ)ದ ಅಂಕುರ (ಮೊಳಕೆ) ಒದವಿದುವು (ಉಂಟಾಯಿತು.)

೭. ಚಪಲಾಕ್ಷಿ(ಚಂಚಲವಾದ ಕಣ್ಣುಳ್ಳ ಸೀತೆ)ಯ ಕೋಮಲವಾದ ಪಾಣಿಪಲ್ಲವ (ಚಿಗುರಿನಂತಿರುವ ಕೈಯ) ಸ್ಪರ್ಶದ ಹರ್ಷದಿಂದ ರಘುರಾಮನು ಬಾಲಾತಪಂ (ಎಳೆಯ ಬಿಸಿಲು) ಎಳಸಿದ (ಅಪೇಕ್ಷಿಸಿದ) ಪುಂಡರೀಕಷಂಡ (ತಾವರೆಯ ವನ)ದ ಸೊಬಗನ್ನು ಅಪಮಾನಿಸಿದನು.

೮. ಶತಮಖ(ನೂರು ಯಜ್ಞಮಾಡಿದ ಇಂದ್ರ)ನನ್ನೂ ಶಚಿಯನ್ನೂ ರತಿಪತಿಯನ್ನೂ ರತಿಯನ್ನೂ ಹಿಮಾಂಶುವಂ (ಚಂದ್ರನನ್ನೂ)ರೋಹಿಣಿಯನ್ನೂ ನೋಡುವ ಹಾಗೆ— ಪುರಜನವು ಅತಿಲಲಿತವಾದ ಆಕೃತಿ (ಯುಳ್ಳ ಆ) ದಂಪತಿಗಳನ್ನು ನೋಡಿತು.

## ಶ್ರೀಕೃಷ್ಣರುಕ್ಮಿಣಿಯರ ವಿವಾಹ

ಆಗ ಒಂದು ಶೃಂಗಾರ (ಅಲಂಕಾರ)ದ ವೇಶ್ಮ (ಮನೆ)ಯಲ್ಲಿ ಭೀಷ್ಮಕನ ಸುತೆ(ಮಗಳಾದ ರುಕ್ಮಿಣಿ)ಯನ್ನು ಅಲಂಕರಿಸಲೆಂದು ನೆರೆದ ಅನೇಕ ವಿಧದ ವನಿತೆ (ಸ್ತ್ರೀ)ಯರು ಆಕೆಯ ಸೌಕುಮಾರ್ಯವನ್ನು ನಿರೀಕ್ಷಿಸಿ (ಕುರಿತು ನೋಡಿ)—

೧. "ವಿಲಸಿತಮಪ್ಪ (ಪ್ರಕಾಶಮಾನವಾದ) ಅದೊಂದು ಹೊಳಪನ್ನು ತಳೆದಿರುವ ಇಂದು (ಚಂದ್ರನ) ಲೇಖೆಯನ್ನು ಹೊಳಪಿಡಬೇಕೆ? ಸಹಜ (ಹುಟ್ಟಿನಿಂದ) ಸುಂದರವಾದ ರೂಪೆ (ರೂಪವುಳ್ಳವಳು) ಆದವಳನ್ನು, ಈ ಮೃಣಾಳ (ತಾವರೆ ದಂಟಿನಂತೆ) ಕೋಮಲೆಯಾದವಳನ್ನು ಅಲಂಕರಿಸಬೇಕೆ? ಮಂಗಳವರ್ಧನಾರ್ಥಂ (ಮಂಗಲವನ್ನು ಹೆಚ್ಚಿಸುವ ಉದ್ದೇಶದಿಂದ ಮಾತ್ರ) ಈ ಲಲನೆಯನ್ನು ವಿವಿಧವಾದ ಆಭರಣಗಳ ಪ್ರತಾನ (ಸಮೂಹ)ದಿಂದ ಅಲಂಕರಿಸೋಣ."

ಎಂದು ನುಡಿದು, ಅಂತೆ (ಹಾಗೆಯೇ) ಕೈಗೆಯ್ಸಿ (ಅಲಂಕಾರಮಾಡಿ) ರುಕ್ಮಿಣಿಯನ್ನು ಪರಿಣಯನ (ಮದುವೆಯ) ಭವನದೊಳ್ (ಮನೆಯಲ್ಲಿ) ಯಥಾ ಉಚಿತ(ಯಾವುದು ತಕ್ಕುದೋ ಅಂಥ)ಆಚಾರದಿಂದ ಇರಿಸಿ—

೨. ಕೋಮಲವಾದ ಮಾತುಳಂಗ (ಮಾದಳದ) ಫಲಧಿಂದ ಬಲಗೈಯೂ ಕಳಮ (ಬಿಳಿಯ ಅಕ್ಕಿಯ) ಅಕ್ಷತೆಯಿಂದ ಆರ್ದ್ರ (ಒದ್ದೆಯಾಗಿ) ಪೂರ್ಣ (ತುಂಬಿದ) ಅಮಳ (ಸ್ವಚ್ಛವಾದ) ಶಂಖದಿಂದ ಎಡಗೈಯೂ ಎಸೆಯುತ್ತಿರಲು, ಉತ್ಕಟ (ತೀವ್ರ)ವಾದ ಪ್ರೇಮವುಳ್ಳವನೂ ಉದಾತ್ತವಾದ ವೇದಗಳಲ್ಲಿ ಮತಿ(ಬುದ್ಧಿ)ಯುಳ್ಳವನೂ ವಿಶ್ವ (ಎಲ್ಲಾ) ವಿದ್ಯೆಗಳಿಂದ ಮಹಿತಂ (ಘನತೆಪಡೆದವನೂ) ಯದುಗಳ ವಂಶಕ್ಕೆ ಹಿತ (ವನ್ನು ಕೋರುವವ)ನೂ ಆದ ಪುರೋಹಿತನು ದ್ವಿಜ (ಬ್ರಾಹ್ಮಣರ) ಓಘ (ಗುಂಪಿನ) ಸಹಿತಂ (ಸಂಗಡ) ಕೃಷ್ಣ ಸಭಾವಲಯಕ್ಕೆ ಬಂದನು.

ಹಾಗೆ ಬಂದು, ಪುರೋಹಿತನು ಉಚ್ಚಾರಿತ ಸ್ವಸ್ತಿಶಬ್ದನಾಗಿ (ಸ್ವಸ್ತಿ ಎಂಬ ಶಬ್ದವನ್ನು ಉಚ್ಚಾರಮಾಡಿದವನಾಗಿ) ಮಾತುಳಂಗ(ಮಾದಳದ) ಫಲವನ್ನು ನೀಡಿ, 'ವಿವಾಹದ ಲಗ್ನ (ಮುಹೂರ್ತ)ವು ಆಸನ್ನಂ (ಹತ್ತಿರ ಬಂದಿತು)' ಎಂದು ಬಿನ್ನಹಮಾಡಲು; ಅಂಬುರುಹ(ಪದ್ಮ)ನಾಭನು ಸಂಭ್ರಮದಿಂದ ಪರಿಣಯನ (ಮದುವೆಯ) ಭವನ (ಮನೆಗೆ) ಅಭಿಮುಖನ್ (ಎದುರಾದವನು) ಆಗಿ—

೩. ಬಳವತ್ (ಸಮರ್ಥವಾದ) ಅಪಾರ (ಮಿತಿಯಿಲ್ಲದ) ವೇದಗಳ ರುತಿ (ಧ್ವನಿ), ಗೇಯ (ಹಾಡಿನ) ರವಂ (ಧ್ವನಿ), ಪಟಹಗಳ ಸ್ವನಂ (ಧ್ವನಿ), ಪುರೀ (ಪೌರರ) ಕಳಕಳದಿಂದ ದಳಂಬಡೆದು (ವೃದ್ಧಿಯಾಗಿ), ವಿಶ್ವ (ಸಮಸ್ತ) ಜಗತ್ತಿನ ಜನದ ಕೀರ್ತನಾ (ಸ್ತೋತ್ರಮಾಡುವ) ರವಗಳಿಂದ ಇನಿಸು (ಒಂದಿಷ್ಟು) ಏಳ್ಗೆವೆತ್ತು (ಅಭಿವೃದ್ಧಿ ಪಡೆದು), ದಿಗಿಭ (ದಿಗ್ಗಜ)ಗಳ ಬೃಂಹಿತ (ಘೀಂಕಾರದ) ಭೂರಿ (ವಿಶೇಷವಾದ) ನಾದದಿಂದ ಜಲನಿಧಿಯನ್ನು (ಸಮುದ್ರವನ್ನು) ಅಂತು (ಒಳಕೊಂಡು) ಘೂರ್ಣಿಪಿನಂ (ಮೊರೆಯುವಷ್ಟರ ಮಟ್ಟಿಗಿದ್ದ) ಆ ಗೃಹಮಂ (ಮದುವೆ ಮನೆಯನ್ನು) ಅಚ್ಯುತನು ಪುಗುತಂದ (ಹೊಕ್ಕ)ನು.

ಹಾಗೆ ವಿವಾಹಮಂಟಪವನ್ನು ಪುಂಡರೀಕಾಕ್ಷನು ಹೊಗಲಾಗಿ, ಮಹಾಉತ್ಸಾಹಪರಂಪರೆ ನೆಗಳೆ(ಉಂಟಾಗಲು), ತದನಂತರಂ(ಆದಾದ ಬಳಿಕ)—

೪. ದುಕೂಲ(ಪಟ್ಟೆವಸ್ತ್ರ)ದ ಕಾಂಡಪಟಂ(ತೆರೆಯು) ಉತ್ತಮವಾದ ಲಗ್ನ(ಮುಹೂರ್ತ)ದಲ್ಲಿ ತೊಲಗೆ (ಸರಿದುಹೋಗಲು); ದಂಪತಿಗಳು ಒಬ್ಬರು ಒಬ್ಬರನ್ನು ಒಲವಿಂದೆ (ಪ್ರೀತಿಯಿಂದ) ನಲಿದು ಈಕ್ಷಿಸಲು; (ಅವರ) ನೋಟದ ಬಳ್ಳಿಬಳ್ಳಿ ನೆಯ್ದಿಲ ಮಳೆಯಲ್ಲಿ ಸುಧಾ (ಅಮೃತ) ರಸದ ಸೋನೆಯಲ್ಲಿ ಅಂಗಜ (ಮನ್ಮಥನ) ಬಾಣಗಳ ವೃಷ್ಟಿ(ಮಳೆ)ಯಲ್ಲಿ ಸಲೆ (ಚೆನ್ನಾಗಿ) ನಿಲೆ (ನಿಲ್ಲುವಹಾಗೆ) ಕೂಡೆ (ಆಗಲೇ) ವಿವಾಹಗೃಹದ ಅಂತರಾಳದೊಳ್ (ಒಳಭಾಗದಲ್ಲಿ) ಪರ್ವಿ(ಹಬ್ಬಿಕೊಂಡು)ಕೊರ್ವಿದುದು (ಕೊಬ್ಬಿತು, ಹೆಚ್ಚಿತು.)

ಅಲ್ಲಿಂದ ಬಳಿಕ—

೫. ಮೃದು(ವಾದ) ಗತಿ (ಗಮನದಿಂದ) ವಿಲೋಲ (ಜೋತಾಡುವ) ಹಾರರ್ (ಹಾರವುಳ್ಳ ಆ) ಮದುಮಕ್ಕಳು ದಕ್ಷಿಣಾವರ್ತಶಿಖಾಸ್ಪದನಂ (ಬಲಗಡೆಗೆ ತಿರುಗುವಂಥ ಬೆಂಕಿಯ ನಾಲಗೆಗಳುಳ್ಳ) ಹೋಮಾನಲನನ್ನು ಪ್ರದಕ್ಷಿಣ(ವಾಗಿ) ಬಂದು, ಮಿಸುಪ (ಹೊಳೆಯುವ) ಲಾಜೆಯಿಂ (ಅರಳಿನಿಂದ) ಪೂಜಿಸಿದರು.

ಹಾಗೆ ವಿವಾಹಮಂಗಳವು ಪರಿಪೂರ್ಣವಾಗಲು, ಚತುರ್ಥ (ನಾಲ್ಕನೆಯ ದಿನದ) ಮಹೋತ್ಸವದ ಅನಂತರ, ಅಂದಿನ (ಐದನೆಯ ದಿನದ) ಇರುಳಿನಲ್ಲಿ—

೬. ಬೆರಳಿನಲ್ಲಿ ಮುದ್ರಿಕೆಯಂ (ಉಂಗುರವನ್ನು) ತೊಡಿಸುವ, ಕಪೋಲ (ಹಣೆಗೆನ್ನೆಯ) ಸ್ಥಾನದಲ್ಲಿ ಪತ್ರವಲ್ಲರಿ(ಎಲೆ ಸಹಿತವಾದ ಬಳ್ಳಿ)ಯನ್ನು ಚಿತ್ರಿಸುವ, ಹಾರವನ್ನು ಹಿಡಿದು ನೋಡುವ, ಆಸ್ಯ (ಮುಖ)ವೆಂಬ ಅಂಬುಜ(ಕಮಲ)ದ ಸ್ವೇದಮಂ (ಬೆವರನ್ನು) ಕರದಿಂದಂ (ಕೈಯಿಂದ) ತೊಡೆ(ಒರಸು)ವ, ಒಯ್ಯನೆ (ಮೆಲ್ಲನೆ) ಉಳ್ಳುಡೆಗೆ (ಉಟ್ಟಸೀರೆಗೆ) ಕಾಂಚೀದಾಮ(ಒಡ್ಯಾಣ)ವನ್ನು ಸಾರ್ಚು(ನೀಡಿ ಸೇರಿಸು)ವ, ಒಳ್ಗುರುಳಂ (ಸೊಗಸಾದ ಮುಂಗುರುಳನ್ನು) ನೇರ್ಪಡೆ (ಸರಿಯಾಗುವಂತೆ) ತಿದ್ದುವ—ಈ ನೆವದಿಂದ ಕೃಷ್ಣನು (ತನ್ನ) ನಲ್ಲಳಂ (ಪ್ರಿಯೆಯನ್ನು) ಪೊರ್ದಿದಂ (ಹೊಂದಿದನು.)

೭. ಒಲವಿಂ (ಪ್ರೀತಿಯಿಂದ) ನೋಡುವ ನೋಟದಿಂದ, ಪದೆದು

(ಪ್ರೀತಿಸಿ) ಸೋಂಕು(ಮುಟ್ಟು)ತ್ತಿರುವ ಸೋಂಕಿನಿಂದ, ಮನಸ್ಸನ್ನು ಗೆಲೆ (ಗೆಲ್ಲುವಂತೆ) ಮಾತಾಡುವ ಮಾತಿನಿಂದ (ರುಕ್ಮಿಣಿಯ) ಲಜ್ಜಾ (ನಾಚಿಕೆ) ಸಾಧ್ವಸ (ಭೀತಿ ಇವುಗಳ) ಉದ್ರೇಕವನ್ನು ಕಳೆದು (ಹೋಗಲಾಡಿಸಿ); ಆಕೆ (ಆ ರುಕ್ಮಿಣಿ) ಜಲಜಾತ (ಕಮಲ)ದಂತೆ ಅಕ್ಷ (ಅಕ್ಷಿ ಎಂದರೆ ಕಣ್ಣುಗಳುಳ್ಳವ)ನಲ್ಲಿ ಬಿಚ್ಚತಿಕೆ (ಸಂಕೋಚವಿಲ್ಲದ ಸಲುಗೆ) ಯನ್ನು ಮಾಡಲು, ಬಳಿಕ ಕಲಾಸಿಲಯ(ನಾದ ಕೃಷ್ಣ)ನು ಚುಂಬನ (ಮುತ್ತಿಕ್ಕುವುದು) ಪರಿಷ್ವಂಗ (ಆಲಿಂಗಿಸುವುದು) ಪ್ರಪಂಚಂಗಳಂ (ಮೊದಲಾದುವನ್ನು) ಒಲಿದು ಮಾಡಿದನು.

೮. ಅನುದಿನಂ (ಪ್ರತಿದಿನವೂ) ಇಂತು (ಹೀಗೆ) ರುಕ್ಮಿಣೀವನಿತೆಗೆ ಕಾಮ (ಬೇಕುಬೇಕಾದ) ಸುಖದಿಂದ ಅನುರಾಗವನ್ನು ಇತ್ತು (ಉಂಟು ಮಾಡಿ), ರಕ್ಷಣ (ಬೇಕಾದ್ದನ್ನು ಕೊಟ್ಟು ಕಾಪಾಡುವ) ಕ್ಷಮತೆಯಿಂದೆ (ಸಾಮರ್ಥ್ಯದಿಂದ) ಅತಿಯಾಗಿ ಹರ್ಷವನ್ನು ಉಂಟುಮಾಡಿ, ಮೇದಿನಿ (ಭೂಮಿ)ಗೆ ಮಹತ್ವದಿಂದ ಜಸ(ಯಶ)ವನ್ನು ಆಗಿಸಿ, ಯಾದವರ ಸಂಕುಲ (ಸಮೂಹ)ಕ್ಕೆ ಪೆಂಪು (ಆಧಿಕ್ಯವು) ಅನುಗುಣವಾಗಿರಲ್ (ತಕ್ಕಹಾಗೆ ಇರುವಂತೆ) ಅಚಿಂತ್ಯಬಲನಾದ (ಸಾಮರ್ಥ್ಯ ಇಷ್ಟೇ ಎಂದು ಊಹಿಸಲಾಗದ) ಬಲಾನುಜಂ (ಬಲರಾಮನ ತಮ್ಮನಾದ ಕೃಷ್ಣನು) ಸುಖದಿಂದ ಇದ್ದನು.

## ಸುಭದ್ರಾರ್ಜುನರ ವಿವಾಹ

ಆಗ ಪಚ್ಚೆಯ (ಹಸುರುಕಲ್ಲಿನ) ನೆಲಗಟ್ಟಿನಿಂದಲೂ ರಾಜಾವರ್ತ ಶಿಲೆಯ (ಎಳೆಯ ನೀಲದ ಕಲ್ಲಿನ) ಕಂಬದಿಂದಲೂ ಹವಳದ ಜಂತೆಯಿಂದಲೂ ಪದ್ಮರಾಗದ ಬೋದಿಗೆ(ಕಂಬಕ್ಕೂ ಜಂತೆಗೂ ಮಧ್ಯದ ಕಲ್ಲು)ಇಂದಲೂ ಇಂದ್ರನೀಲದ ಭದ್ರದಿಂದಲೂ ಕರ್ಕೇತನದ (ಇದೂ ಒಂದು ತೆರದ ರತ್ನ) ಜಾಳರಿಗೆಯಿಂದಲೂ ಸ್ಫಟಿಕದ ಚಿತ್ತಾರವಾದ ಭಿತ್ತಿ (ಗೋಡೆ) ಇಂದಲೂ ಚಂದ್ರಕಾಂತದ ಚಂದ್ರಶಾಲೆಯಿಂದಲೂ ಒಪ್ಪುವ ವಿವಾಹ ಗೇಹ(ಗೃಹ)ವನ್ನು ಸಮೆಯಿಸಿ (ಮಾಡಿಸಿ), ಅದರ ನಡುವಿನ ಆರ್ದ್ರ (ಒದ್ದೆಯಾದ) ಮೃತ್ತಿಕಾ (ಮಣ್ಣಿನಿಂದ) ವಿರಚಿತಂ

ಅಪ್ಪ (ಮಾಡಿದಂಥಾದ್ದು ಆದ) ಚತುರಾಂತರದೊಳ್ (ಚಚ್ಚೌಕದಲ್ಲಿ ಮುತ್ತಿನ ಚೌಕದ ನಡುವಿನ ಚೆಂಬೊನ್ನ (ಕೆಂಪು ಚಿನ್ನದ) ಪಟ್ಟವಣ (ಹಸೆಮಣೆ)ಯ ಮೇಲಿನ ದುಗುಲ (ಪಟ್ಟವಸ್ತ್ರ)ದ ಹಸೆಯಲ್ಲಿ ಗುಣಾ ರ್ಣವ(ನಾದ ಅರ್ಜುನ)ನನ್ನು ಆ ಸುಭದ್ರೆಯೊಡನೆ ಕುಳ್ಳಿರಿಸಿ, ಹಿತ (ಬೇಕಾದಂಥ) ಪುರೋಹಿತನು ಪ್ರಾಜ್ಯ (ಯಥೇಚ್ಛವಾಗಿ ಕೊಟ್ಟ ಆಜ್ಯಾಹುತಿ (ತುಪ್ಪದ ಆಹುತಿ)ಯಿಂದ ಹುತ (ಹೋಮಮಾಡಿದ) ಹುತವಹ (ಬೆಂಕಿಯ) ಸಮಕ್ಷದೊಳ್ (ಎದುರಿಗೆ)—

೧. ಹಸುರಿನ ಹಂದರು (ಚಪ್ಪರ), ಹಸೆ, ವೇದ(ವನ್ನು) ಪಾರಗ (ಬಲ್ಲವರ) ರವಂ (ಧ್ವನಿ), ಕಣ್ಣಿನ ಬೇಟ (ಪ್ರೇಮ)ದ ಉದ್ಘಾನಿ (ಅಧಿ ಕತೆ)ಯನ್ನು ಪಸರಂಗೆಯ್ದುವೊಲ್ ಅಪ್ಪ (ಪಂಕ್ತಿಯಾಗಿ ಮಾಡಿದ ಹಾ ರುವ) ಪೊಚ್ಚರ (ಪ್ರಸಿದ್ಧರಾದ) ಮಹಾಸಾಮಂತರ ಸೀಮಂತಿನೀ (ಸ್ತ್ರೀ ಯರ) ಪ್ರಸರಂ (ಸಾಲೂ) ಮಂಗಳತೂರ್ಯ (ವಾದ್ಯ)ಗಳ ನಾದವೂ ಎಸೆಯುತ್ತಿರಲಾಗಿ—ಚಕ್ರಿ (ಚಕ್ರವುಳ್ಳ ಕೃಷ್ಣನು) ರಾಗಿಸಿ (ಪ್ರೀತಿ ಯಿಂದ) ಗುಣಾರ್ಣವ ಮಹೀಪಾಲನಿಗೂ ಆ ಕನ್ಯೆ(ಯಾದ ಸುಭದ್ರೆ)ಗೂ ಕೈನೀರನ್ನು (ಧಾರೆಯಾಗಿ) ಎರೆದನು.

ಹಾಗೆ ಕೈನೀರನ್ನು ಎರೆದು, ಪಾಣಿಗ್ರಹಣ ಮಾಡಿಸಲು—

೨. ಮಂಜಿನೊಳ್ (ಮಂಜಿನಿಂದ) ತುರುಗಿ (ದಟ್ಟವಾಗಿ) ಇಡಿದರೆ (ತುಂಬಿರುವಾಗ) ತೆಂಕಣ (ದಕ್ಷಿಣ ದಿಕ್ಕಿನ) ಗಾಳಿಯಲ್ಲಿ ಆದ ಸೋಂಕಿ ನಿಂದ ನಡುಗುವ ಅಶೋಕದ ವಲ್ಲರಿಯ (ಗೊಂಚಲಿನ) ಪಲ್ಲವದೊಳ್ (ಚಿಗುರಿನೊಡನೆ) ನವ (ಹೊಸದಾದ) ಚೂತಪಲ್ಲವಂ (ಮಾವಿನ ಚಿಗುರು) ತೊಡರ್ದವೊಲ್ (ಹೆಣೆದುಕೊಂಡಹಾಗೆ) ಆಗಲು—ಘರ್ಮ (ಬೆವರಿನ) ಜಲದಿಂದ ನಡುಪ (ನಡುಗುವ) ಆಕೆಯ ಪಾಣಿಪಲ್ಲವ (ಚಿಗು ರಿನಂತಹ ಹಸ್ತ)ವನ್ನು ಹಿಡಿದು, ಗುಣಾರ್ಣವನ ಒಪ್ಪುವ ಪಾಣಿಪಲ್ಲ ವವು ಬೆಡಗನ್ನು ಆಳ್ದುದು (ಹೊಂದಿತು.)

ಅಂತು(ಹಾಗೆ) ಒಬ್ಬರೊಬ್ಬರ ಕಿರುಕುಣಿಕೆಗಳನ್ನು ಹಿಡಿದು, ರತಿಯೂ ಕಾಮದೇವನೂ ಬರುವಂತೆ ಬೇಳ್ವೆ(ಹೋಮದ ಅಗ್ನಿ)ಯ ಕೊಂಡದ ಮೊದಲಿಗೆ ಬಂದು, ಆ ದಂಪತಿಗಳು ಸಪ್ತಾರ್ಚಿ (ಅಗ್ನಿ)ಯನ್ನು ಮೂರು

ಸೂಳ್ (ಸಲ) ಬಲವಂದು (ಪ್ರದಕ್ಷಿಣಮಾಡಿ) ನಿಂತು, ಇಂಬಳಿಯಂ (ಅದಾದ ಬಳಿಕ) ಆಕೆ (ಆ ಸುಭದ್ರೆ) ಪುರೋಹಿತನು ಹೇಳಿದ ಓಜೆಯೊಳ್ (ರೀತಿಯಲ್ಲಿ) ಲಾಜೆಯಂ (ಅರಳನ್ನು) ಅಗ್ನಿಕುಂಡದಲ್ಲಿ ಸುರಿದು—

೩. ಅದರ (ಆ ಅರಳನ್ನು ಅಗ್ನಿಯಲ್ಲಿ ಸುರಿದುದರ) ಪೊದಳ್ದು (ವ್ಯಾಪಿಸಿ) ನೀಳ್ದ (ಉದ್ದವಾದ) ಹೊಗೆಯನ್ನು ಲುಳಿತಾಳಕೆ (ಸಂಚಲಿಸುವ ಮುಂಗುರುಳುಗಳುಳ್ಳ ಸುಭದ್ರೆ) ತನ್ನ ವಕ್ತ್ರಪದ್ಮದಿಂ (ಕಮಲದಂಥ ಮುಖದಲ್ಲಿ) ಒಸೆದು (ಪ್ರೀತಿಯಿಂದ) ಆಂತೊಡೆ (ತಾಳಿದರೆ)—ಆ ನವ (ಹೊಸದಾದ) ಧೂಮಲೇಖೆ (ಹೊಗೆಯ ಗೆರೆ) ಆಕೆಯ ಕಪೋಲದಲ್ಲಿ ಬೆಳ್ಪು (ಬಿಳಿಯಬಣ್ಣ) ಇದಿರ್ಗೊಳೆ (ಎದುರಿಗೆ ಬಂದರೆ), ಗಾಡಿವೆತ್ತು (ರೀವಿಯನ್ನು ತಾಳಿ), ಅಡರ್ದು (ಮೇಲೆ ಹತ್ತಿ), ಕತ್ತುರಿಯೊಳ್ (ಕಸ್ತೂರಿಯಲ್ಲಿ) ಮದದ ಪಟ್ಟೆಯನ್ನು ವಿಲಾಸದಿಂದ ತೆಗೆದ ಹಾಗೆ, ಆ ಕದನತ್ರಿಣೇತ್ರನ (ಯುದ್ಧರಂಗದಲ್ಲಿ ರುದ್ರನಂತೆ ಸಂಹಾರಕನಾದ ಅರ್ಜುನನ) ಕಣ್ಣಿಗೆ ಎಸೆದು ತೋರಿತು.

ಹಾಗೆ ಸೊಗಯಿಸಲು; ಹಾಡುವ ಮಂಗಳರವಗಳೂ ಓದುವ ಋಚೆ (ಋಗ್ವೇದದ ಮಂತ್ರ)ಗಳೂ ಹರಸುವ ಹರಕೆಗಳೂ ಎಸೆಯೆ (ಕಿವಿಗೆ ಹಿತವಾಗಲು), ಹಸೆಯಲ್ಲಿ ಇದ್ದು—

೪. "ಪರಿಜೆಯ (ಆಕಾರಕ್ಕೆ) ನಂಟು (ಅನುರೂಪವಾಗಿ ಹೊಂದಿಕೊಂಡಿರುವ) ಕೆನ್ನೆಗಳನ್ನು ಒಯ್ಯನೆ(ಮೆಲ್ಲಗೆ) ನೀವುವ, ಚಿನ್ನ (ಕಿರಿಯ) ಹೂವನ್ನು ಓಸರಿಸುವ (ಒಂದುಪಕ್ಕಕ್ಕೆ ಮಾಡುವ), ಹಾರವನ್ನು ಹಿಡಿದು ನೋಡುವ, ಕಟ್ಟಿದ ನೂಲಿನ ತೊಂಗಲಂ(ಗೊಂಡೆಯನ್ನು) ತಿರುಗಿಸುವ ಕೆಯ್ತ(ಕಾರ್ಯ)ದ ಒಂದು ನೆಪದಿಂದ ಲಲಿತಾಂಗಿಯ ಶಂಕೆಯನ್ನೂ ಭಯದಿಂದ ಬೆರಸಿದ (ಕೂಡಿದ) ನಾಣುಮಂ (ನಾಚಿಕೆಯನ್ನೂ) ಕ್ರಮದೆ (ಕೊಂಚ ಕೊಂಚವಾಗಿ) ಪಿಂಗಿಸು (ಹೋಗಲಾಡಿಸು), ಗುಣಾರ್ಣವಾ. ಬೇಸರಪಡದಿರು."

ಎಂದು ಕೆಲ(ಪಕ್ಕ)ದಲ್ಲಿದ್ದ ದಂಡುರುಂಬೆ (ಗಂಡುಬೀರಿ)ಗಳು ಬುದ್ಧಿಯನ್ನು ಹೇಳಲು; ಹಾಗೆ ಒಪ್ಪುವ ವಿವಾಹಮಂಗಳದ ಒಸಗೆಯೊಳ್

7

(ಶುಭಸಂದರ್ಭದಲ್ಲಿ) ಮಂಗಳಪಾಠಕರು (ಪರಿಸುವವರು) ನಿಂತಿದ್ದು—

೫. "ಇಂದ್ರನ ಅನೋಕಹ (ಕಲ್ಪವೃಕ್ಷ), ಒಪ್ಪುವ ಇಂದ್ರನ ತುರಗ (ಕುದುರೆ), ಸಂದ(ಒಪ್ಪುವ) ಇಂದ್ರನ ಗೇಹ(ಮನೆ), ಪೊದಳ್ದ(ಹೊಂದಿದ) ಇಂದ್ರನ ಆನೇಕಪ (ಆನೆ), ಒಪ್ಪುವ ಇಂದ್ರನ ಅಖಿಳ ಇಂದ್ರೈಶ್ವರ್ಯ, ಇಂದ್ರಾಣಿ (ಇಂದ್ರಪತ್ನಿ), ಸಂದ ಇಂದ್ರನ ಅನರ್ಘ್ಯವಾದ ವಿಭೂಷಣಗಳು(ಇವು ಎಲ್ಲಾ) ಅರಿನೃಪ(ಶತ್ರುರಾಜ)ರುಗಳೆಂಬ ದುಸ್ತಮುಸ್(ಕೆಟ್ಟ ಕತ್ತಲೆಗೆ) ಚಂದ್ರನ ಹಾಗಿರುವ ಅರಿಗಂಗೆ (ಅರಿಕೇಸರಿ ಎಂಬ ಅರ್ಜುನನಿಗೆ) ಮಂಗಳಮಹಾಶ್ರೀಯನ್ನೂ ಜಯಶ್ರೀಯನ್ನೂ ಈಗೆ (ಕೊಡಲಿ.)"

ಎಂದು ಮಂಗಳವೃತ್ತಗಳನ್ನು ಓದಲು—

೬. ತೊಟ್ಟ ತೊಡಿಗೆಗಳು ಒಂದೊಂದೂ ಕೌಸ್ತುಭರತ್ನವನ್ನು ಮಸುಳಿಸೆ (ಮಂಕುಮಾಡಿಬಿಡುವಂತೆ), (ಕೊಟ್ಟ) ಆನೆಗಳು ಹಾಲುಗಡಲಿನಲ್ಲಿ ಹುಟ್ಟಿದ ಆನೆಗಳನ್ನು ಗೆಲೆವರೆ (ಮೀರಿಸುವಂತೆ), (ಕೊಟ್ಟ) ಕುದುರೆಗಳು (ಹಾಲುಗಡಲಿನಲ್ಲಿ ಹುಟ್ಟಿದ) ಕುದುರೆಯನ್ನು ಕೀಳ್ಮಾಡೆ (ತುಚ್ಛೀಕರಿಸುವಂತೆ), (ಕೊಟ್ಟ)ಗಣಿಕೆಯರು ಮದನನು ತೊಟ್ಟ ಪೂಗಣೆಗೆ (ಹೂವಿನ ಬಾಣಕ್ಕೆ) ಎಣೆಯಾಗುವಂತೆ—ಬಗೆಯದೆ (ಏನೂ ಯೋಚನೆಯಿಲ್ಲದೆ) ಇಂತು (ಹೀಗೆ), (ತನ್ನ) ಸರ್ವಸ್ವವೆಲ್ಲವನ್ನೂ ತಂಗಿಗೆ ಬಳಿವಳಿಯೆಂದು ಇಂತು ಪುರುಷೋತ್ತಮನು ಕೊಟ್ಟನು

## ಶ್ರೀಮತಿ ವಜ್ರಜಂಘರ ವಿವಾಹ

ಹಾಗೆ ನೆರೆಯೆ (ಸಮೃದ್ಧಿಯಾಗಿ) ಕೈಗೆಯ್ದು (ಅಲಂಕರಿಸಿ), ವಧೂವರರು ಇಬ್ಬರನ್ನೂ ಮೌಹೂರ್ತಿಕ (ಮುಹೂರ್ತವನ್ನು ತಿಳಿದವರ) ಗಣ (ಗುಂಪು) ನಿರೂಪಿತ (ಕಟ್ಟಿಕೊಟ್ಟಂತಹ) ಪ್ರಶಸ್ತವಾದ ಮುಹೂರ್ತದಲ್ಲಿ ಅತಿಯಾದ ಪ್ರಮೋದದಿಂದಲೂ ನಿರ್ಭರ (ತುಂಬಿದ) ಪ್ರಣಯ(ಪ್ರೇಮ) ದಿಂದಲೂ ಪ್ರಹತ (ಹೊಡೆದ)ಮಂಗಳ ಪಟಹಗಳ ರವಗಳೂ ಅತಿಮಧುರವೂ ಮಂದ್ರ(ಕೆಳಧ್ವನಿಯಲ್ಲಿ ಹಾಡಿದ್ದು)ವೂ ಮನೋಹರವೂ ಆದ ಮಂಗಳಗೀತದ ರವಗಳೂ ಅಲಕ್ತಕ (ಅರಗಿನ) ದ್ರವ(ರಸ)ದಿಂದ ಅರುಣ (ಕೆಂಪಾದ) ಚರಣ(ಕಾಲು)ಗಳಲ್ಲಿ ರಣಿತ (ಧ್ವನಿಮಾಡುತ್ತಿರುವ)

ನೂಪುರ(ಕಾಲುಗೆಜ್ಜೆಯ) ಮುಖರಿತ(ಸದ್ದು ತುಂಬಿದ) ದಿಗಂತರ(ದಿಕ್ಕು ದಿಕ್ಕುಗಳ)ಅಂತಃಪುರ ಜನದ ಆಶೀರ್ವಾದದ ಕೋಲಾಹಲವೂ ಎಸೆಯೆ (ಉಂಟಾಗಲು), (ಆ ವಧೂವರರನ್ನು) ಮುಂದಿಟ್ಟು ತಂದು, ವಿವಾಹ ಮಂಟಪದ ನಡುವಿನ ಮಣಿ(ರತ್ನ)ಮಯವಾದ ವೇದಿಕೆ(ಜಗುಲಿ)ಯ ಹಾಟಕ (ಚಿನ್ನದ) ಪೀಠದ ಮೇಲೆ ಹಾಸಿದ ದುಗುಲ (ಪಟ್ಟುವಸ್ತ್ರದ) ದಳಿಂಬದೊಳ್ (ಹಸೆಯಲ್ಲಿ) ಇರಿಸಿದಾಗ; ಸಕಲಚಕ್ರವರ್ತಿಯಾದ—

೧ ಶ್ರೀ ವಜ್ರದಂತ(ನೆಂಬ) ಕ್ಷಿತಿ(ಭೂ)ಪತಿಯು "ಈ ದಂಪತಿಯ ಬಯಕೆ ಎತ್ತಾನುಂ (ಹೇಗಾದರೂ)ನೆರೆದತ್ತು(ಈಡೇರಿತು.) ಉತ್ಸವವು ಸಂಪೂರ್ಣವಾಯಿತು. ಎನ್ನ (ನನ್ನ) ಸಾಮ್ರಾಜ್ಯದ ಫಲವು ಕಣ್ದೆರೆದಂತಾಯಿತು" ಎನ್ನುತ್ತಾ; ರಾಗ(ತನ್ನ ಅನುರಾಗ)ವನ್ನು ಬೀರಲ್ (ಬೀರುವುದಕ್ಕಾಗಿಯೂ) ಆದ (ತನಗೆ ಉಂಟಾದ) ಅಳ್ಕರ(ಪ್ರೀತಿಯ) ಪೆಂಪಂ (ಆಧಿಕ್ಯವನ್ನು) ತೋರಲ್ (ತೋರುವುದಕ್ಕಾಗಿಯೂ) ತಾನೇ ಬಂದು, ಕನಕ (ಚಿನ್ನದ)ಕಲಶವನ್ನು ಎತ್ತಿ, ಸತತ(ಎಡೆಬಿಡದ)ಉತ್ಸಾಹ ಸಂದೋಹದಿಂದ(ಪರಂಪರೆಯಿಂದ)ಕೈಗೆ(ಧಾರೆಯ) ನೀರನ್ನು ಎರೆದನು.

ಹಾಗೆ ಕೈಗೆ ನೀರೆರೆದು ಪಾಣಿಗ್ರಹಣ ಗೆಯ್ಸಿ(ಮಾಡಿಸಿ)ದಾಗ,ವಜ್ರ ಜಂಘನು (ಇವನೇ ವರ) ಶ್ರೀಮತಿಯ (ಇವಳೇ ವಧೂ) ಸಿಕಾಮ(ಸಹಜವಾಗಿ) ಕೋಮಲವಾದ ಕರತಳಪಲ್ಲವ (ಚಿಗುರಿನಂಥ ಅಂಗೈಯನ್ನು) ಸ್ಪರ್ಶನ (ಸೋಂಕಿದ್ದರ) ಸುಖ (ದಿಂದ) ಉನ್ಮೀಲಿತ (ಅರಳಿದ)ಲೋಚನನ್ (ಕಣ್ಣುಗಳುಳ್ಳವನು) ಆಗಲು—

೨. ಇನಿಯನ (ತನ್ನ ಪ್ರಿಯನ) ಕೆಂದಳಂ(ಕೆಂಪು ಅಂಗೈ) ತಳಮನ್ (ತನ್ನ ಅಂಗೈಯನ್ನು) ಒಯ್ಯನೆ (ಮೆಲ್ಲನೆ) ಸೋಂಕಲು; ಪೊದಳ್ದ (ವ್ಯಾಪಿಸಿದ) ನಾಣ (ನಾಚಿಕೆಯ) ಪೆಂಪಿನೊಳ್ (ಆಧಿಕ್ಯದಿಂದ) ಒಗೆತರ್ಪ (ಬಸಿಯುವ) ಘರ್ಮ (ಬೆವರಿನ) ಜಲದ ಬಿಂದು(ಹನಿ)ಗಳಿಂದ ನಮಿತ ಆನನಾಬ್ಜೆ (ಕಮಲದಂಥ ಮುಖವನ್ನು ತಗ್ಗಿಸಿದ ಆ ಶ್ರೀಮತಿ) —ಬೆಚ್ಚನೆ ಬಸಿಯುವ ಇಂದು(ಚಂದ್ರ)ನೆಂಬ ಕಾಂತ(ಪ್ರಿಯ)ನ ಕರ (ಕಿರಣ, ಕೈ)ಗಳ ಸಂಕುಲ (ಗುಂಪು) ಒಯ್ಯನೆ (ಮೆಲ್ಲನೆ) ಅವುಂಕಿ (ಅಮುಕಿ) ಸೋಕಿದರೆ, (ಆ) ಸೋಕಿನಿಂದ ಒರೆವ (ನೀರುಬಿಡುವ)

ಇಂದುಕಾಂತ (ಚಂದ್ರಕಾಂತವೆಂಬ) ಮಣಿ (ರತ್ನದಿಂದ ಮಾಡಿದ) ಪುತ್ರಿಕೆ(ಬೊಂಬೆ)ಯು ಅಂದದಿಂದ ಒಪ್ಪಿ ತೋರಿದಳು.

ಆ ಪ್ರಸ್ತಾವ(ಸಂದರ್ಭ)ದಲ್ಲಿ—

೩. (ಶ್ರೀಮತಿಯು ತನ್ನ) ಹರಿವ (ಪ್ರಿಯನನ್ನು ಕಾಣಲು ಓಡುವ) ಕಟಾಕ್ಷ(ಕಡೆಗಣ್ಣಿನ ನೋಟ)ಗಳನ್ನು ಓಸರಿಸುತ್ತ (ಒಂದು ಪಕ್ಕಕ್ಕೆ ಇರಿಸುತ್ತ), ನಿಮಿರ್ವ (ತಲೆಯೆತ್ತುತ್ತಿರುವ) ಸುಯ್ಗಳಿಂ (ನಿಟ್ಟುಸಿರುಗಳಿಂದ) ಕುಸಿಯುತ್ತಾ, ಶರ (ಬಾಣ) ಪಾಶ (ಬಲೆ) ಇವುಗಳ ನಡುವಿನ ಹರಿಣಿ(ಹೆಣ್ಣುಜಿಂಕೆ)ಯು ಹಾಗೆ ಮನಸ್ಸಿನಲ್ಲಿ ಆಗ ಆಕುಲೆ (ವ್ಯಾಕುಲವುಳ್ಳವಳು) ಆದಳು.

ಆಗ ವಜ್ರಜಂಘನು—

೪. ಪುಳಕ (ರೋಮಾಂಚವನ್ನು) ಪ್ರೋದ್ಭೇದ (ಭೇದಿಸಿಕೊಂಡು ಬರುವ) ಘರ್ಮ (ಬೆವರಿನ) ಉದಕ (ನೀರಿನ) ವಿಸರಮಂ (ಪ್ರವಾಹವನ್ನು) ತಾಗೆಯುಂ (ಎದುರಿಸುವುದಕ್ಕಾಗಿ) ನಿಶ್ಚಲವಾದ ಧೈರ್ಯದ ವ್ಯಾಜ(ನೆಪದಲ್ಲಿ) ತಿರ್ಯಕ್ (ಹಿಂದುಗಡೆಗೆ) ವಳನ (ತಿರುಗುವುದರಲ್ಲಿ) ತರಳಿತಂ (ಚಂಚಲವಾದ) ದೃಷ್ಟಿಯು ನಿರ್ವ್ಯಾಕುಳಂ (ನಿಶ್ಚಿಂತೆಯಿಂದ) ಆಗ ಪೇಳ್ದತ್ತು (ಹೇಳಿತು.): (ಆದರೂ) ರಾಜಪುತ್ರನ ಸ್ಮಿತ (ನಗುವಿನಿಂದ ಕೂಡಿದ) ಮಧು(ವಿನಂತೆ) ಮಧುರ (ಸಿಹಿ) ಆದ ಅಪಾಂಗ ಜೈತ್ರಾಂಗಜಾಸ್ತ್ರಂ (ಅಂಗಜನ, ಎಂದರೆ ಮನ್ಮಥನ ಅಸ್ತ್ರ, ಎಂದರೆ ಬಾಣಗಳನ್ನು ಜೈತ್ರ, ಎಂದರೆ ಜಯಿಸಿದ ಅಪಾಂಗ, ಎಂದರೆ ಕಡೆಗಣ್ಣಿನ ನೋಟ)ಗಳ ಕೋಳಂ (ಗ್ರಹಣಶಕ್ತಿಯನ್ನು) ನೂತನ (ಹೊಸದಾದ) ಪ್ರೇಮದಿಂದ ನಿಮಿರ್ವ (ಬೀರುವ) ಎಡೆಯೊಳ್ (ಹೊತ್ತಿನಲ್ಲಿ) ದೃಷ್ಟಿಯನ್ನು ಕಾವನ್ (ಕಾಪಾಡಿಕೊಳ್ಳುವವನು) ಯಾರು ?

ಅಂತು (ಹಾಗೆ) ಅಭಿನವ (ಹೊಸದಾದ) ಸಂಗ(ದಿಂದ) ಸಮುತ್ಪನ್ನ (ಉಂಟಾದ) ಸಾಧ್ವಸ (ಭೀತಿಯ) ರಸದಿಂದ ರಮಣೀಯತರ(ವಾದ ತನ್ನ) ಮುಗ್ಧ (ಏನೂ ಅರಿಯದ) ವಧೂ (ಹೆಣ್ಣಿನ) ವದನ(ಮುಖವನ್ನು) ವಿಲೋಕನ (ಕಂಡದ್ದರ) ಸುಖವನ್ನು ಅನುಭವಿಸಿ—

೫. "ಇನಿತು (ಇಷ್ಟೊಂದು) ಪಿರಿದು (ದೊಡ್ಡದು ಆದ) ಒಂದು

ಮೇಳಮುಂ (ಹೊಂದಿಕೆಯೂ) ಒಡಂಬಡುಂ (ಒಪ್ಪಿಕೆಯೂ) ಅಳ್ಕರುಂ (ಪ್ರೇಮವೂ) ನನ್ನ ನಿನ್ನ ಮುನ್ನಿನ (ಇದಕ್ಕೆ ಹಿಂದಿನ) ಭವ(ಜನ್ಮ)ದ ಒಂದು ಕೂರ್ಮೆ(ಪ್ರೀತಿ)ಯಿಂದ ಕೂಡಿದುದು (ಆಗಿಬಂತು.) ಈ ಭವ (ಜನ್ಮ)ದಿಂದ ಆದ ವಾಸನೆ ಮರುಮೆಯ್ಗಂ (ಇನ್ನೊಂದು ಜನ್ಮಕ್ಕೂ) ಅಕ್ಕುಂ(ಆಗುತ್ತದೆ) ಅದರಿಂದ ನನಗೂ ನಿನಗೂ ಸಮಂತು (ಚೆನ್ನಾಗಿ) ಮುನ್ನಿನ ಭವಂ (ಮೊದಲಿನ ಜನ್ಮ), ಈ ಭವಂ (ಈ ಜನ್ಮ), (ಮತ್ತು) ಮರುಭವಂ (ಮುಂದಿನ ಜನ್ಮ) ಸಫಲ(ವಾಯಿತು), ಮೃಗಲೋಲ ಲೋಚನೇ (ಜಿಂಕೆಯಂತೆ ತರಳವಾದ ಕಣ್ಣುಗಳುಳ್ಳ ಹೇ ಶ್ರೀಮತಿ !)"

ಎಂದು, ಕೆಚ್ಚುವಿರ್ದ (ಅಭಿಮಾನವನ್ನು ಬಿಟ್ಟ) ಮಚ್ಚುವಂ (ಗಾಢವಿಶ್ವಾಸವನ್ನೂ) ಉರ್ಚಿಪೋದ(ಚೆಲ್ಲಿಹೋಗಿದ್ದ) ಮೇಳ(ಸ್ನೇಹ) ವನ್ನೂ ಅಳವಿ ಕಳಿದ (ಮಿತಿಮೀರಿದ) ಅಲಂಪುಮಂ (ಪ್ರೀತಿಯನ್ನೂ) ಬಳವಿ (ವೃದ್ಧಿ)ಪಡೆದ ಅಳ್ಕರು(ಪ್ರೇಮು)ವನ್ನೂ ಒಬ್ಬರೊಬ್ಬರಲ್ಲಿ ನೆರೆದು (ತುಂಬಿ) ಅನೇಕ ವಿಧವಾದ ಸುಖಸುಧಾರಸಕ್ಕೆ ಅಧೀನವಾದ ಚಿತ್ತ ವುಳ್ಳವರಾಗಿ—

೬. "ದಿವಿಜೇಂದ್ರ (ದೇವೇಂದ್ರನ) ಆವಾಸ (ಮನೆಯ) ಸೌಖ್ಯಕ್ಕಿಂತ ಎಸೆವ ಈ ಸೌಖ್ಯವು ಅತಿಶಯ (ವಾದದ್ದು.) ಆ ದೇವಿಗಂ (ಇಂದ್ರಾಣಿ ಗಿಂತ) ರೂಪವಿಲಾಸದ ಶ್ರೀ(ಸಂಪತ್ತಿ)ಯಲ್ಲಿ ಈ (ಶ್ರೀಮತೀ) ದೇವಿಯೆ ಮಿಗಿಲ್ (ಮೇಲಾದವಳು.) ಈ(ಕೆಯ) ಮಾನವ ದೇಹದ ಆಕಾರವು ಅಮರ (ದೇವತೆಗಳ ದೇಹದ) ಆಕಾರವನ್ನು ಗೆದ್ದಿತು." ಎಂದು ಭುವ ನದ ಜನವು ಎಂಬ ಹಾಗೆ ಇರಲು, ಶ್ರೀಮತಿಯ ವಕ್ತ್ರ (ಮುಖ) ಚಂದ್ರ(ನ) ಛವಿ (ಕಾಂತಿಯು) ಚೆಲ್ವನ್ನು ಮಾಳ್ಪಿನಂ (ಉಂಟುಮಾಡು ತ್ತಿರಲಾಗಿ) ವಜ್ರಜಂಘನು ಅಖಿಳ ಭೋಗಗಳನ್ನು ಭೋಗಿಸಿದನು.

## ಭರತ ಸುಭದ್ರಾದೇವಿಯರ ವಿವಾಹ

೧. ಕನ್ಯೆ(ಯಾದ ಸುಭದ್ರಾದೇವಿ) ಮುತ್ತಿನ ಮೆಟ್ಟಕ್ಕಿಯಲ್ಲಿ (ಕಾಲಿ ರಿಸಿ) ನಿಂತಳು. ಮತ್ತ ಕಾಶಿನಿ(ಸುಮಂಗಲಿ)ಯರು ಶೋಭನದ(ಸೋಬಾ ನೆಯ) ಧವಳ(ಹಾಡು)ಗಳನ್ನು ಸ್ವರವೆತ್ತಿ ಹಾಡುತ್ತಿದ್ದರು.

೨. ಮೆಟ್ಟಕ್ಕಿಯಲ್ಲಿ (ಕಾಲಿರಿಸಿ) ನಿಂತು, (ತನ್ನ) ನಲ್ಲನ (ಪ್ರಿಯನ) ಎದೆಗೆ ಜುಮ್ಮು ತಟ್ಟಿಸಿ (ರೋಮಾಂಚವುಂಟುಮಾಡಿ, ಆತನನ್ನು) ಬರಿಸಿದಳು ಎನ್ನುವಂತೆ—ಭರತೇಶನು "ಇದೆ, ಲಗ್ನ ಮುಟ್ಟಲಾಯ್ತು (ಸಮೀಪಿಸಿತು.)" ಎಂಬುದನ್ನು ಕೇಳಿದೊಡನೆ, ತಟ್ಟನೆ ಬರುತ್ತಿದ್ದನು.

೩. ಬಲಗೈಯಲ್ಲಿ ಆಂತ (ತಳೆದ) ಚಿನ್ನದ ಒರೆಯು ಕರಾರಿ, ಜಕ್ಕುಲಿಸುವ (ಸಂತೋಷವುಂಟುಮಾಡುವ) ದೇವ(ತೆಗೆ ತಕ್ಕ) ಶೃಂಗಾರ, ತೊಳಗುವ ಹಾವುಗೆ(ಪಾದರಕ್ಷೆ)ಯನ್ನು ಮೆಟ್ಟಿ, ಚಾಮರ ಸೀಗುರಿ(ಇದೂ ಒಂದು ತೆರದ ಚಾಮರ) ಇವುಗಳ ಬಲುಮೋಡಿ (ಮಾಟ)ದಲ್ಲಿ ಬರುತ್ತಿದ್ದನು.

೪. ತೆರೆಯ ಮರೆಯಲ್ಲಿ ಇದ್ದ (ತನ್ನ) ನಲ್ಲಳ (ಪ್ರಿಯೆಯನ್ನು) ನೋಡುವ ಆತುರದಲ್ಲಿ ಉದ್ದವಾದುದನ್ನು ಏರುವಂತೆ, ಬರುತ್ತಾ, 'ಶುಭಕರ! ಜಯ! ಜಯ!' ಎಂಬ ರವದ ನಡುವೆ ಮೆಟ್ಟಕ್ಕಿಯನ್ನು ಮೆಟ್ಟನಿಂತನು.

೫. ಸಿದ್ಧಾಂತ (ಜೈನ ಧರ್ಮಗ್ರಂಥಗಳಲ್ಲಿ) ಸಂಪಾದಿತ (ಸಂಪಾದಿಸಿರುವ) ಮಂಗಲಾಷ್ಟಕವನ್ನು ಭೂಸುರ(ಬ್ರಾಹ್ಮಣ)ರು ಒಡನೆ ಓದಿದರು. 'ಆದಿಚಕ್ರಿ (ಮೊದಲನೆಯ ಚಕ್ರವರ್ತಿಯಾದ ಭರತನಿ)ಗೆ, ಸುಭದ್ರಾದೇವಿಗೆ ಅಧಿಕವಾದ ಲೀಲೋದಯ ದೊರಕೊಳ್ಳಲಿ (ಉಂಟಾಗಲಿ.)' ಎಂದು (ಹರಸಿದರು.)

೬. ನುತ (ಪ್ರಸಿದ್ಧವಾದ) ಮಂಗಲಾಷ್ಟಕಗಳನ್ನು ಓದುತ್ತಾ, ಎಡೆಯಲ್ಲಿ (ಅದರ ಮಧ್ಯೆ) 'ಆಯುತವೆ (ಮುಹೂರ್ತಪ್ರಶಸ್ತವಾಗಿದೆಯೆ?)' ಎಂದು (ಆ ಭೂಸುರರು) ಉರೆ (ಮೇಲಿಂದ ಮೇಲೆ) ಕೇಳುವರು; ಅದಕ್ಕೆ ಹಿತವರಾದವರು 'ಆಯುತ (ಪ್ರಶಸ್ತವಾಗಿದೆ)' ಎನ್ನಲು, 'ಸನ್ನದ್ಧರಾಗಿ' ಎಂಬ ಅತುಳವಾದ ವಾಕ್ಯಗಳು ಮೆರೆದುವು.

೭. ಪರಮ ಮಂತ್ರವನ್ನು ಓದಿ, ಮುತ್ತಿನ ಅಕ್ಷತೆಗಳನ್ನು ಹರಸಿ ದಂಪತಿಗಳಿಗೆ ಇಡುತ್ತಾ, ತಿರುಗಿ ಮತ್ತೆ 'ಆಯುತವೆ?' ಎನ್ನುವರು; ಅದಕ್ಕೆ (ಇತರರು) ಒಸೆದು (ಪ್ರೀತಿಯಿಂದ) ಚೆಚ್ಚರವಾಗಿ (ಜೋಕೆ ತಪ್ಪದೆ) 'ಆಯುತ' ಎನ್ನುವರು.

೮. ಸುಲಲಿತವಾದ ಮಂಗಲಾಷ್ಟಕ ಪೂರ್ಣವಾಗಿ, ಮಂಗಲದ ಕೌಶಿಕೆಯ ರಾಗದಲ್ಲಿ, ಪಳಮಂಜರಿರಾಗದಲ್ಲಿ ಹಾಡಿದರೆ—ಜಯ ಜಯ (ಎಂಬ ಶಬ್ದಗಳ ನಡುವೆ) ಮಧ್ಯದ ತೆರೆ ತೊಲಗಿತು.

೯. (ಹೆಣ್ಣಿನ ಕಡೆಯವರಾದ) ನಮಿರಾಜ ವಿನಮಿಗಳೂ(ಗಂಡಿನಕಡೆಯವರಾದ) ಸಿಂಧು ಗಂಗಾದೇವಿಯರೂ ಪ್ರಮದೆ(ಯಾದ ಸುಭದ್ರೆ)ಯ ಕೈಗೆ ಹೂಮಾಲೆಯನ್ನು ಕೊಟ್ಟು, 'ಇದನ್ನು ನಿನ್ನ ರಮಣನಿಗೆ ಸೂಡು (ಮಾಲೆ ಹಾಕು), ಅಕ್ಕ' ಎಂದು ಅಮಲ (ನಿಷ್ಕಲ್ಮಷವಾದ) ಸಂಭ್ರಮದಿಂದ ಆಡಿದರು.

೧೦. ನಾಣ್ (ನಾಚಿಕೆ)ಇಂದ ತಲೆ ಕುಸಿ(ತಗ್ಗಿಸಿ)ದವಳ ಕೈಗಳನ್ನು ಮಧುವಾಣಿ (ಎಂಬ ದಾದಿ) ಮತ್ತೆ ಎತ್ತಿ ('ಮಾಲೆ ಹಾಕು') ಎಂದು ಸೂಚಿಸಲು; ಧವಳ ಕಲ್ಯಾಣ ಶೋಭನದ ಘೋಷದ ನಡುವೆ (ಆ ಸುಭದ್ರೆ) ಪ್ರಾಣಕಾಂತನಿಗೆ ಮಾಲೆಯಿಟ್ಟಳು.

೧೧. 'ನಿನ್ನಿಂದ ನನಗೆ, ನನ್ನಿಂದ ನಿನಗೆ ಮುನ್ನ (ಇದಕ್ಕೆ ಮೊದಲು) ತಾಪ ಉಕ್ಕಿ ಹೊಯ್ಮಾಲೆ (ಏಟಿನ ಮಾಲೆ, ಕಳವಳ) ಆಯಿತು. ಇನ್ನು ಹೊಯ್ಮಾಲೆ ಇಲ್ಲ, ಹೂಮಾಲೆಯಾಯಿತು.' ಎಂಬ ಗನ್ನ (ಚೇಷ್ಟೆ) ಯಿಂದ ಮಾಲೆಯಿಕ್ಕಿದಳು.

೧೨. ತೋಳ ಮೊದಲು (ಕಂಕುಳು) ತಳತಳಿಸುವಂತೆ ಎರಡು ದುಂಡು ತೋಳನ್ನು ಎತ್ತಿ, ಆ ನೀರೆ (ಯುವತಿ) ಕೊರಳಿಗೆ ಆ ಮಾಲೆಯನ್ನು ಇಡುವಾಗ, ಆ ನೃಪನಿಗೆ ತ್ರಿಜಗದ ಭಾಗ್ಯ ಬಂದು (ತನ್ನನ್ನು) ಓಲೈಸಿದ (ಸುತ್ತುಗಟ್ಟಿದ) ಹಾಗೆ ಆಯಿತು.

೧೩. ಮಾಲೆಯನ್ನು ನೆಗಹಿ (ಮೇಲೆತ್ತಿ) ಇಕ್ಕುವಾಗ ಗಂಡನ ಮುದ್ದು ಮುಖವನ್ನು ಕಾಣುತ್ತ, ಎದೆಗೆ ಜುಮ್ಮುತಟ್ಟಿ, ಆಕೆ ನಗುತ್ತಾ ಲಜ್ಜೆಯಿಂದ ತಲೆಯನ್ನು ಕುಸಿದಳು. ರಾಯನು ಒಪ್ಪಚ್ಚಿ (ಸ್ವಲ್ಪವೇ) ಮಿನುಗು(ತೋರು)ವಂತೆ ನಗುತ್ತಿದ್ದನು.

೧೪. ಮತ್ತೆ, ಸಕಲ ಇಂದ್ರಿಯ ಸುಖದ ಸಂಪತ್ತನ್ನು ಕೈಸಾರ್ಚು (ನೀಡುವ) ರೀತಿಯಲ್ಲಿ (ಸುಭದ್ರಾದೇವಿಯ) ನಾಲ್ವರು ಸೋದರರು (ತಮ್ಮ) ತಂಗಿಯ ಕೈಯನ್ನು ಎತ್ತಿ ಚಕ್ರೇಶನ ಕೈಗೆ ಹತ್ತಿಸಿದರು.

೧೫. ಕರತಳ (ಅಂಗೈ) ಸೋಂಕಲು, ಒಬ್ಬೊಬ್ಬರ ಮೈಯಲ್ಲೂ ಪುಳಕ(ರೋಮಾಂಚ)ಗಳು ಅಂಕುರಿಸು(ಮೊಳೆಯು)ತ್ತಿದ್ದುವು; (ಎಂದ ಮೇಲೆ), ಪರಿರಂಭ(ಆಲಿಂಗನ)ದೊಳಗೆ ಇನ್ನು ಸರ್ವಾಂಗ ಸೋಕಿದಾಗ, ಅರರೇ, (ಅದರ) ವಿಲಾಸ ಇನ್ನು ಹೇಗೋ!

೧೬. ಎಳೆಯ ಲತೆಯನ್ನು ಬಿನ್ನಾಣ(ತಿಳಿವಳಿಕೆ, ಜಾಣತನ)ದಿಂದ ತಂದು ಬಾವನ್ನ(ಚಂದನ)ದ ವೃಕ್ಷಕ್ಕೆ ಹಬ್ಬಲು ಕೊಟ್ಟು, ಪನ್ನೀರನ್ನು ಎರೆಯುವಂತೆ ನಮಿರಾಜನು ಹೊನ್ನಗಿಂಡಿಯಲ್ಲಿ ಧಾರೆಯನ್ನು ಎರೆದನು.

೧೭. "ಅಂಗಜಾಗಮ (ಮನ್ಮಥ ವಿದ್ಯೆ) ಸಿದ್ಧಿಯಾಗಲಿ! ಲೀಲೆ ಆಗಲಿ! ಸುಸಂಗವಾಗಲಿ! ಜಯಾ!" ಎಂಬ ರವದ ನಡುವೆ, ತಂಗಾಳಿಯು ಹೂವಿನ ಕಂಪನ್ನು ಹಿಡಿಯುವಂತೆ, ರಾಯನು ತನ್ನ ಅಂಗನೆಯ (ಹೆಣ್ಣಿನ) ಅಂಗುಲಿ (ಕೈಬೆರಳನ್ನು) ಹಿಡಿದನು.

೧೮. ನಲ್ಲಳ (ಪ್ರಿಯೆಯ) ಕೈಹಿಡಿದು, ಒತ್ತಿನಲ್ಲಿ (ಹೊಂದಿಕೊಂಡು) ನಡೆದು, ಧೂಮವ (ಹೊಗೆಯನ್ನು) ಕಳೆದು ಉರಿಯುವ ಉಲ್ಲಾಸವಾದ ಹೋಮಕುಂಡವನ್ನು ಮೆಲ್ಲನೆ, ಓಜೆಯೊಳು (ಕ್ರಮವಾಗಿ) ಗಾಡಿಯೊಳು (ಠೀವಿಯಿಂದ) ಬಲವಂದನು (ಪ್ರದಕ್ಷಿಣ ಬಂದನು.)

೧೯. ಇನಿಯಳ (ತನ್ನ ಪ್ರಿಯೆಯಾದ ರತಿಯ) ಕೈ ಹಿಡಿದು, ಇನ (ಚಂದ್ರ) ಬಿಂಬದ ಒತ್ತಿನಲ್ಲಿ ಬಿನದ(ವಿನೋದ)ಕ್ಕಾಗಿ, ಆಡುವ ಕಾಮನಂತೆ (ಆ ಭರತನು) ತನ್ನ ಮಾನಿನಿಯ ಹಸ್ತದ ಅಂಗುಲಿಯನ್ನು ಹಿಡಿದು ಅನಲ (ಅಗ್ನಿ) ಕುಂಡವನ್ನು (ಪ್ರದಕ್ಷಿಣವಾಗಿ) ಸುತ್ತಿಬಂದನು.

೨೦. ಅಳಿಯನೊಡನೆ ಹೋಗುವ ಮಗಳ ಗಾಡಿ (ಠೀವಿ)ಯನ್ನು, ಹೆಂಗುಸರ ಮರೆಯಲ್ಲಿ ನಿಂತು ನೋಡಿ, ಪುಳಕ (ರೋಮಾಂಚ)ವನ್ನು ಆಂತು (ತಾಳಿ), ಯಶೋಭದ್ರಾದೇವಿ ಎಳಸಿ (ಪ್ರೀತಿಯಿಂದ) ಆನಂದ ರಸದಲ್ಲಿ ಓಲಾಡಿದಳು (ಮುಳುಗಿ ತೇಲಿದಳು.)

## ರತಿ ಮನ್ಮಥರ ಮನೆವಾರ್ತೆ

ಹಾಗೆ ಕರುಮಾಡದ (ಉಪ್ಪರಿಗೆ ಮನೆಯ) ಮುಂದಿನ ಓಲಗಸಾಲೆಯಲಿ ಶಂಗಾರದ ಚೆನ್ನನು (ಚೆಲುವನು.) ಆಂತ (ತಳೆದ) ಪಟ್ಟದ

ಮಣೆಯ ಮೇಲೆ ಇಚ್ಚೈಗಾರ್ತಿ (ರತಿಯು) ಬೆರಸು (ಸಂಗಡ) ನನೆವಿಲ್ಲ ಬಲ್ಲಹಂ(ಮೊಗ್ಗನ್ನು ಪ್ರಯೋಗಿಸುವ ಬಿಲ್ಲಿಗೆ ಒಡೆಯನಾದ ಮನ್ಮಥನು) ಕುಳ್ಳಿರಲಾಗಿ—

೧. ನಿಗಳದ (ಕಾಲಿಗೆ ಹಾಕಿದ ಸರಪಣಿಯು) ನುಣುಪಾದ ಸ್ವರ ನೆಗೆಯುವಂತೆ ನುಡಿಗಳು ಕಿವಿಗೆ ಇಂಪನ್ನು ಕೊಡುತ್ತಿರಲು, ಮಗಮಗಿಸುತ್ತಿರುವ ನರು (ಸುವಾಸನೆಯಾದ) ಸುಯ್ಯ(ಉಸಿರಿ)ಗೆ ಅಲರ್ವಕ್ಕಿ (ಹೂವಿನಲ್ಲಿ ಹಕ್ಕಿಯಂತೆ ಹಾರಿಯಾಡುವ ತುಂಬಿ) ಜಿನುಗುತ್ತಾ ಇರಲು, (ನೋಟಕರ) ಬಗೆಯನ್ನು ಕೊಳ್ಳುವಂತೆ ಬಂದು ನಿಂತು ನೆರೆದ ಅಗ್ಗದ (ಉತ್ತಮರಾದ) ನೀರೆ(ಯುವತಿ)ಯರು, ಒಲಿದು ಹಬ್ಬುವ ಆ ಹೊಗಳಿನ ಉಲಿ (ಕೂಗು) ಹೊಮ್ಮುತ್ತಿರಲಾಗಿ, ವಿಸ್ತಾರದಿಂದ(ಆ ರತಿಮನ್ಮಥರಿಗೆ) ಆಗ ಮುತ್ತಿನ ಸೇಸೆ(ಅಕ್ಷತೆ)ಯನ್ನು ಇಕ್ಕಿದರು.

೨. ನೊಸಲ (ಹಣೆಯ) ಎಡೆಯಲ್ಲಿ (ಪ್ರದೇಶದಲ್ಲಿ) ನೀಳ್ದ (ಉದ್ದವಾಗಿಬಿದ್ದ ಕುರುಳ (ಕೂದಲಿನ) ಓಳಿ(ಸಾಲು)ಗಳು ಉಯ್ಯಾಲೆಯಾಡುವಂತೆ, ಡಾಳಮಂ (ಕಾಂತಿಯನ್ನು) ಪಸರಿಸುವ ತೋರ(ದಪ್ಪ) ಮುತ್ತಿನ ಸರವು ಮೊಲೆಯಲ್ಲಿ ತಲೆಯೊತ್ತುವಂತೆ, ನಾಡೆಯುಂ(ಅಧಿಕವಾಗಿ)ಮಿಸುಗುವ (ಚಲಿಸುವ) ಕಣ್ಣಿನ ನುಣುಪಾದ ಬೆಳಕು ಜೊನ್ನದೊಳ್ (ಬೆಳದಿಂಗಳಿನೊಡನೆ) ಓರಗೆಯಾಗುವಂತೆ, ಸೊಂಪು ಹೊಂದಿಕೊಳ್ಳುವಂತೆ ಅಗ್ಗದ (ಉತ್ತಮರಾದ) ಗಾಡಿಕಾರ್ತಿಯರ್ (ಜರುಬಿನವರು) ಹೊಸ ರತ್ನದ ಆರತಿಯನ್ನು ಎತ್ತಿದರು.

೩. (ಮನ್ಮಥನ) ಬಿಳಿಯ ನನೆಯ (ಮೊಗ್ಗಿನ) ಕಣೆಗೆ (ಬಾಣಕ್ಕೆ) ನಾಡೆ (ಅಧಿಕವಾಗಿ) ಪಗೆವರ (ಶತ್ರುಗಳ) ಒಡಲ್ (ದೇಹವು) ಕೂಡೆ (ಒಡನೆ) ಸುಗಿಯೆ (ಹಿಂದೆಗೆಯುವಂತೆ) ನೆಲವನ್ನು ಒಂದೆಕೊಡೆಯಿನ್ (ಏಕಚ್ಛತ್ರದ ಆಶ್ರಯದಲ್ಲಿ) ಆಳಿ, ಮಿಸುಗುವ ಯಶಸ್ಸು ನಿಮಿರೆ (ಅಧಿಕವಾದುದನ್ನು) ಕೇಳಿ—

೪. ಕುಳಿರ್ವ (ತಂಪಾದ) ಹೂವಿನ ಕೊಳಗಳಲ್ಲಿ, ತಳಿರ (ಚಿಗುರು ಬಿಟ್ಟ) ಕಾವಣ(ಬಳ್ಳಿಯ ಮನೆ)ಗಳಲ್ಲಿ, ಪಳಿಕು (ಸ್ಫಟಿಕದಿಂದ) ಬೆಸದ (ಕೆಲಸಮಾಡಿದ) ಬೆಟ್ಟದಲ್ಲಿ, ಹರಿಯುವ ತೊರೆಯ ತಡಿ(ದಡ)ಗಳಲ್ಲಿ—

೫. ತುಂಬಿಯ ಹಿಂಡಿನಂತೆ ಹಾಡಿ, ಜಕ್ಕವಕ್ಕಿ (ಚಕ್ರವಾಕ ಪಕ್ಷಿ) ಯಂತೆ ಕೂಡಿ (ಹೊಂದಿಕೊಂಡು), ದೆಸೆ(ದಿಕ್ಕು)ಗಳನ್ನು ಇಚ್ಛೆ(ಆಸೆ) ಯಿಂದ ನೋಡಿ, ಸೊಗಯಿಸುವ ಅಂಚೆ (ಹಂಸ)ದಂತೆ ಇರೆ (ಇರುವ ಹಾಗೆ) ಆಡಿ—

೬. ಹೊಳೆಯುವ ತಳಿರ (ಚಿಗುರಿನ), ಮೊನೆಯ ನನೆಯ (ಎಳೆಯ ಮೊಗ್ಗಿನ), ತುರುಗಿದ (ದಟ್ಟವಾದ) ಅಲರ (ಹೂವಿನ), ಬಳಸುವ (ಸುತ್ತಲೂ ಬೀಸುವ) ಎಲರ (ಗಾಳಿಯ), ಮಿಳಿರ್ವ (ತೂಗಾಡುವ) ಮಿಡಿ (ಕಾಯಿಗಳ), ಗಿಳಿಯ ನುಡಿಯ(ನ್ನುಳ್ಳ), ಹರಿಯುವ ಕಾಲ (ಕಾಲುವೆಯ), ಕರ್ಪುರಗೋಲ (ಕಬ್ಬಿನ ಜಲ್ಲೆಯ)—

೭. (ಇವುಗಳೆಲ್ಲದರ) ಚೆಲುವನ್ನು ಆಂತು (ಹೊಂದಿ) ತೋರುವ ವನದ ನಡುವೆ ತನ್ನ ಆದೊಂದು ಬಿನದ (ವಿನೋದವು) ಅಮರೆ (ಅಧಿಕ ವಾಗುವಂತೆ) ಮಿರುಗುವ ಬಟ್ಟ (ಗುಂಡಾದ) ಮೊಲೆಯ ಸೊಬಗನ್ನು ರೂಢಿ (ಸಹಜವಾಗಿ) ಪಡೆದ ನೆಲೆಯ (ಹತ್ತಿರವೇ ಆಗಲದೆ ಇರುವ)—

೮. ಚೆನ್ನೆಯರುಗಳೊಡನೆ ಕೂಡಿ, ಮುಗುಳ (ಮೊಗ್ಗಿನ) ಸರವನ್ನು ಅಡರೆ (ಒಂದರ ಮೇಲೆ ಒಂದು) ಸೂಡಿ (ಮಾಲೆ ಹಾಕಿಕೊಂಡು), ನಲ್ಲರ (ಪ್ರಿಯರ) ಒಡನೆ ಕೂರ್ಮೆ(ಪ್ರೀತಿ)ಯಿಂದ, ಕಾಮನೊಡನೆ ಪೆರ್ಮೆ (ಹಿರಿಮೆ)ಯಿಂದ—

೯. ಮಾವಿನ (ಮರದ) ಅಡಿಯಲ್ಲಿ ಆಡುತ್ತಾ, ಹಾಡನ್ನು ಎಯ್ದೆ (ತುಂಬಾ) ಕೇಳುತ್ತಾ, ಪೊಳ್ತನ್ (ಹೊತ್ತನ್ನು) ಇಂತು ಕಳೆಯುತ್ತಾ ಎಸೆಯು(ಬದುಕು)ತ್ತಾ, ತೊಲಗದೆ (ಒಬ್ಬರನ್ನು ಒಬ್ಬರು ಬಿಟ್ಟು ಹೋಗದೆ) ಇದ್ದರು.

ಹೀಗೆ ರತಿಯೂ ಕಾಮದೇವನೂ ರೂಢಿವೆತ್ತು (ಸಹಜವಾಗಿ) ಗಾಡಿ (ಶೀವಿ)ಯಿಂದ ಒಪ್ಪಿದರು.

## ಸೋಬಾನೆ

(ಇದಕ್ಕೆ ಗದ್ಯಾನುವಾದ ಅಗತ್ಯವಿಲ್ಲ.)

## ಪರಿಶಿಷ್ಟ

# ಹೆಣ್ಣಿನ ಹಿರಿಮೆ

೧. ಹೆಣ್ಣನ್ನು ಹೆತ್ತವರ ಬಳಗ ಬೇಗ ಬೆಳೆಯುವುದು. ಹೆಣ್ಣನ್ನು ಹೆತ್ತವರು ಹೆಚ್ಚು (ಅಭಿವೃದ್ಧಿ ಹೊಂದು)ವರು. ಹಾಲುಕಡಲು (ಲಕ್ಷ್ಮಿ ಯೆಂಬ) ಹೆಣ್ಣನ್ನು ಹೆತ್ತುದ್ದರಿಂದ ಹೆಸರು (ಉಳ್ಳದ್ದು)ಎನ್ನಿಸಿತು, ಮಿಗೆ (ಅಧಿಕವಾಗಿ) ಬಣ್ಣವೇರಿತು (ವರ್ಚಸ್ಸು ಪಡೆಯಿತು)

೨ ಹಿಮವಂತನು ಹೆಣ್ಣಿನಿಂದ ಹಿರಿಮೆಯನ್ನು ಕೊಂಡನು, ಭೃಗು ಹೆಣ್ಣಿನಿಂದ ಹೆಚ್ಚಿದನು, ಜನಕರಾಯನು ಹೆಣ್ಣಿನಿಂದ ಜಸ (ಯಶಸ್ಸು) ಪಡೆದನು. ಪೆರರು (ಕಂಡಕಂಡವರು) ಹೆಣ್ಣನ್ನು ನಿಂದಿಸುವುದೇಕೆ?

೩. ಹಿರಿಯರು ಶ್ರೀರಾಣಿಯನ್ನೂ ಸೀತೆಯನ್ನೂ ರುಕ್ಮಿಣಿಯನ್ನೂ ಶ್ರೀಹರಿಯೊಡನೆ ಒಂದೇ ಹಂತಿ(ಪಂಕ್ತಿ)ಯಲ್ಲಿ ಇರಿಸಿ ಪೂಜೆಯನ್ನು ಒಡರಿಸು(ಮಾಡು)ವರು. ಪರಿಕಿಪೊಡೆ (ನೋಡುವುದಾದರೆ), ಅವರು ಹೆಣ್ಣು ಐಸೆ (ಅಲ್ಲವೆ!)

೪. ತಮ್ಮನ್ನೆಲ್ಲ ಪಡೆದ ತಾಯಿ ಹೆಣ್ಣಲ್ಲವೆ? ಪೊರೆ (ಕಾಪಾಡಿ) ದವಳು ಹೆಣ್ಣಲ್ಲವೆ? ಕಣ್ಣುಕಾಣದ ಗಾವಿಲ (ಬುದ್ಧಿಹೀನ)ರು 'ಹೆಣ್ಣು ಹೆಣ್ಣು' ಎಂದು ಏತಕ್ಕೆ ಬೀಳುಗಳೆ(ತಿರಸ್ಕಾರ ಮಾಡು)ವರು?

೫. ಕುವರ(ಕುಮಾರ)ನಾದರೆ, ಅದರಿಂದ ಗುಣವೇನು? ಕುವರಿ (ಕುಮಾರಿ)ಯಾದರೆ (ಅದರಿಂದ ಬಂದ) ಕುಂದೇನು? ಇವರು ಇಬ್ಬ ರಲ್ಲಿ ಏಳಿಗೆ ಪಡೆದವರಿಂದ ಇಹಪರದ ಸೌಖ್ಯ ಸವನಿಪುದು (ಉಂಟಾ ಗುತ್ತದೆ)

೬. ಕುಲಪುತ್ರ(ನಾದವ)ನು ಓದಿ, ತಿಳಿದು, (ಅದರಂತೆ) ನಡೆದಲ್ಲದೆ (ತನ್ನ) ಕುಲವನ್ನು ಉದ್ಧರಿಸಲು ಅರಿಯನು (ಅಸಮರ್ಥನು.) (ಆದರೆ) ಕುಲಪುತ್ರಿಯನ್ನು ಒಳ್ಳೆಯ ಕುವರನಿಗೆ ಇತ್ತ (ಕೊಟ್ಟ) ಮಾತ್ರಕ್ಕೆ (ಅವಳು ತನ್ನ) ಕುಲಕೋಟಿಯನ್ನು ಉದ್ಧರಿಸುವಳು.

೭. ಬಸಿರಿನಲ್ಲಿ ಒಗೆದು (ಹುಟ್ಟಿ) ಬೆಳೆದು, ಏಕರೀತಿಯಲ್ಲಿ ಎಲ್ಲಾ ಶಿಶುಗಳೂ ಇದ್ದರೂ, ಬಳಿಕ (ಅನಂತರ) ಏನು (ಆಗುವರು?) ಪೆಣ್ (ಹೆಣ್ಣು) ಒಸೆದು (ತವರು ಮನೆಯವರು ಪ್ರೀತಿಯಿಂದ) ಇತ್ತುದನ್ನು

ಒಡಬಡು(ಒಪ್ಪು)ವಳು. ಗಂಡು ಬಲ್ಮೆಯೊಳು(ಬಲವಂತದಿಂದ) ಪಸುಗೆ (ಪಾಲು)ಕೊಳ್ಳುವನು.

೮ ಅರಿತು (ತಿಳಿದು) ನಿಟ್ಟಿಸೆ (ಗಮನಿಸಿದರೆ), ಗಂಡು ಮಕ್ಕಳಿಗಿಂತ ಅತಿಶಯವಾದ ಎರಕ(ಪ್ರೀತಿ)ಯಿಂದ ಎಸೆಯುವ ಹೆಣ್ಣುಗಳನ್ನು ಹೊರ ನೋಟ(ಅಲಕ್ಷ್ಯ)ದಿಂದ ನೋಡದೆ, ಪೋಲು (ವ್ಯರ್ಥ) ಎನ್ನಿಸದೆ, ಮರು ಕದಿಂದ ಬೆರಸಿ(ಕೂಡಿ, ಅವರಿಗೆ) ಮನ್ನಿಸ(ಮರ್ಯಾದೆ ಮಾಡು)ವುದು.

೯. "ಇವರು ನನ್ನನ್ನು ಹೆತ್ತವರು ಈ ಮನೆಯ ಒಡವೆ (ವಸ್ತು) ಗಳು ನನ್ನವು." ಎಂದು ಎರವು (ಭೇದಭಾವ) ಇಲ್ಲದೆ ಇರುವ ಕನ್ಯೆ ಯನ್ನು ಅನ್ಯರಿಗೆ (ಮದುವೆಮಾಡಿ) ಈ(ಕೊಡು)ವ ಅನ್ನೆವರಂ (ಅದು ವರೆಗೂ) ಮಮತೆಯಿಂದ ಮನ್ನಿಸುವುದು.

೧೦. ಹಲವು ಬಗೆಯ ಪಸದನ(ಅಲಂಕಾರ)ಗಳನ್ನು ಪದುಳಗೊಳಿಸಿ (ಅಣಿಮಾಡಿ), ಪೊನ್ (ಚಿನ್ನದ) ತೊಡಿಗೆಗಳನ್ನು ಪುದುಗಿಸಿ(ಹೊಂದಿಸಿ), ಮದುವೆಗೆ ನೆರೆದ ಹೆಣ್ಣುಮಕ್ಕಳನ್ನು ನಿಟ್ಟಿಸು(ಗಮನಿಸು)ವವರ ಎದೆ ಗೊಳಿಸುವಂತೆ (ಮನಸ್ಸು ಒಪ್ಪುವಂತೆ) ಎಸಗು(ಮಾಡು)ವುದು.

೧೧. "ಸುಗುಣನು ಯಾವನು? ಸುಚರಿತ್ರ(ಒಳ್ಳೆಯ ನಡತೆಯವ)ನು ಯಾವನು? ಕಣ್ಣಿಗೆ ಸೊಗಸು(ಸುಖವುಂಟುಮಾಡು)ವ ಸೊಬಗ (ಚೆಲುವ)ನು ಯಾರು?" ಎಂದು ಬಗೆದು, ಭಾವಿಸಿ, (ಆಲೋಚನೆ ಮಾಡಿ, ವಿಚಾರಿಸಿ,) (ಸತ್)ವಂಶದಲ್ಲಿ ಒಗೆದ (ಹುಟ್ಟಿದ) ಒಳ್ಳೆಯ ಕುಮಾರನಿಗೆ ಒಲಿದು ಹೆಣ್ಣನ್ನು ಈ(ಕೊಡು)ವುದು (ತಕ್ಕದ್ದು)

೧೨. ಅಲೆಗೈಯದ(ಅಲೆದಾಡಿಸದ), ಅವಮತಿ(ಅವಮಾನ) ಎಸಗದ (ಮಾಡದ), ವೈರವನ್ನು ಬಲಿಸದ, ಬರಿದೆ (ಸುಮ್ಮನೆ, ನಿಷ್ಕಾರಣವಾಗಿ) ಪಳಿಯದ (ನಿಂದಿಸದ), ಕೊಲೆ ಬೈಗಳಿಂದ ಕೋಟಲೆಗೊಳಿಸದ (ಇಂಥ) ಸತ್ಕುಲಕ್ಕೆ ಕುಮಾರಿಯನ್ನು ಈ(ಮದುವೆಮಾಡಿಕೊಡು)ವುದು.

೧೩. ಜಡ(ಸೋಮಾರಿಯಾದವ)ನಿಗೆ, ಜಾತಿಹೀನನಿಗೆ, ಚಂಚಲ (ಸ್ಥಿಮಿತ ಬುದ್ಧಿಯಿಲ್ಲದವ)ನಿಗೆ, ಕಡುಮೂರ್ಖ(ಹೇಳಿದ ಮಾತು ಕೇಳ ದವ)ನಿಗೆ, ಗಾಂಪ(ವಿದ್ಯೆಯಿಲ್ಲದವ)ನಿಗೆ, ಬಡತನದಲ್ಲಿ ಬಲು ಬವಣೆ ಗೊಳ್ಳು(ತೊಳಲಾಡು)ವವನಿಗೆ ಕುಮಾರಿಯನ್ನು ಕೊಡಲಾಗದು.

೧೪. ಇಂತು(ಹೀಗೆ) ಕುವರಿ(ಕುಮಾರಿ)ಯನ್ನು ಕೂರ್ಮೆ(ಪ್ರೀತಿ)ಯಿಂದ ಸಲಹಿ(ಕಾಪಾಡಿ), ಮತ್ತೆ ಅವಳನ್ನು ಒಳ್ಳೆಯ ಕುಮಾರನಿಗೆ ಇತ್ತು (ಮದುವೆಮಾಡಿಕೊಟ್ಟು), ಸವೆಯದ (ಅಕ್ಷಯವಾದ) ಧರ್ಮವನ್ನು ಸಂಪಾದಿಸಿ, ಮಾಧವನ ಮನವ (ಕೃಪೆಯನ್ನು) ಬರಿಸುವುದು (ಸಂಪಾದಿಸಿಕೊಳ್ಳುವುದು )

## ಹೆಣ್ಣನ್ನು ಕೇಳುವುದು

೧

೧. ಪಿನಾಕಿ (ಪಿನಾಕವೆಂಬ ಧನುಸ್ಸನ್ನು ಉಳ್ಳ ಶಿವನು) ಶ್ರೀ ಕೈಲಾಸದಲ್ಲಿ ಇದ್ದು, ವಿವಾಹ(ವಾಗಬೇಕೆಂಬ) ಅರ್ಥ(ಉದ್ದೇಶ)ದಿಂದ ವರಮೂರ್ತಿಗಳು, ಲೋಕೋತ್ತಮರು, ಪುಣ್ಯಶ್ಲೋಕರು (ಆದ) ಆ ಸಪ್ತಋಷಿಯರನ್ನು ನೆನೆದ ಒಡನೆ—

೨. ವಿನುತ (ಪ್ರಸಿದ್ಧರಾದ) ಅಶೇಷರ್ (ಅವರೆಲ್ಲರೂ, ಒಬ್ಬರೂ ಉಳಿಯದಂತೆ), ಜಡೆಯನ್ನು ಧರಿಸಿದವರು, ಭಸಿತವನ್ನು ಅಂಗ(ದೇಹ)ದಲ್ಲಿ ಉಳ್ಳವರು, (ಆದ) ಸಪ್ತಋಷಿಯರು, ಘನವಾದ ಮಹಿಮೆಯುಳ್ಳ ಅರುಂಧತಿ (ತಮ್ಮ) ಬೆನ್ನಹಿಂದೆಯೇ ಬರುತ್ತಿರಲು, ಅತಿಮುದದಿಂದ (ಶಿವನು ತಮ್ಮನ್ನು) ನೆನೆಯದ ಮೊದಲೇ ಬಂದರು.

೩. ಬಂದು, ಅಭವ(ಈಶ್ವರ)ನಿಗೆ ಅತಿಸುಖಮುಖದಿಂದ ಮೆಯ್ಯಿಕ್ಕಿ (ಅಡ್ಡಬಿದ್ದು),"ಹರ! ಬದುಕಿದೆವು!" ಎನುತ್ತಾ, ಪುಳಕಂ (ರೋಮಾಂಚ) ಸಂದಣಿಸಿ (ಮೇಲಿಂದ ಮೇಲೆ) ಎಳ್ತರೆ (ಎದ್ದುಬರಲು), ನಿಂತಿದ್ದು, 'ಶಶಾಂಕಮೌಳಿ (ಜಡೆಯಲ್ಲಿ ಚಂದ್ರನುಳ್ಳವನೆ), ಬೆಸಸು (ಕಾರ್ಯವೇನು, ಆಜ್ಞೆಮಾಡು)' ಎನ್ನಲು; ಮತ್ತೆ—

೪. (ಅವರು ಹಾಗೆ) ಇರಲು ಕಂಡು, ಶಂಕರನು ಕರುಣದಿಂದ ಆ ಋಷಿಗಳಿಗೆ ಬೆಸಸಿದಂ (ಆಜ್ಞೆಮಾಡಿದನು): "ಭೂಧರ(ಪರ್ವತ)ನಾಥ (ರಾಜ)ನಲ್ಲಿಗೆ ಹೋಗುವುದು. ಅತ್ಯಾದರವನ್ನು ಮಾಡುವುದು. ಗಿರಿಸುತೆಯನ್ನು ಬೇಡುವುದು."

೫. (ಶಿವನು ಹೀಗೆ) ಎಂದರೆ; "ಹಸಾದ (ಪ್ರಸಾದ, ಅಪ್ಪಣೆ)"

ಎಂದು, ಆನಂದವು ಮಿಗೆ (ಅಧಿಕವಾಗಿ), ಸಪ್ತಋಷಿಗಳು, ಮಂಡಿತ (ಅಲಂಕಾರಮಾಡಿದ) ಪುಷ್ಪಕ (ವಿಮಾನಗಳ) ವೃಂದ (ಪಂಕ್ತಿಯನ್ನು) ಆರೂಢರ್ (ಏರಿದವರು), ನಗೇಶ (ಪರ್ವತರಾಜನ) ಪುರವನ್ನು ಎಯ್ತಂದರ್ (ಸಮೀಪಿಸಿದರು), ಪೊಕ್ಕರ್ (ಪ್ರವೇಶಿಸಿದರು.)

ಆ ಸಮಯದಲ್ಲಿ—

೬. ಗಿರಿರಾಜನು (ತನ್ನ) ಮನಸ್ಸಿನಲ್ಲಿ ಪರಮೋತ್ಸಾಹವು ಜನಿಯಿಸಿ (ಉಂಟಾಗಿ), ಎನೆವ (ಕಂಗೊಳಿಸುವ) ಋಷಿಗಳನ್ನು ಎದುರುಗೊಂಡು, ಅನುನಯದಿಂ(ತಕ್ಕ ಮರ್ಯಾದೆಯಿಂದ) ತಂದು, ಉಚ್ಚ (ಎತ್ತರವಾದ) ಆಸನದಲ್ಲಿ ಕುಳ್ಳಿರಿಸಿ, ವಿನಯ(ದಿಂದ) ವಿನಮಿತನಾದಂ (ಬಾಗಿದನು.)

ಹಾಗೆ ವಿನಯದಿಂದ ಎರಗಿ—

೭ "ಸುರ(ದೇವ)ಲೋಕದಲ್ಲಿ ಸುಖದಿಂದ ಇರುತ್ತಾ(ಇರುವ) ನಿಮಗೆ (ಇಲ್ಲಿಗೆ) ಬರವು(ಆಗಮನ) ಎಂತು(ಹೇಗೆ) ದೊರೆಕೊಂಡುದು (ಉಂಟಾಯಿತು?) ಇದು (ತಾವು ಬಂದದ್ದು) ನಮ್ಮ ಉರುತರ (ತುಂಬ ದೊಡ್ಡ) ಭಾಗ್ಯ." ಎನ್ನುತ್ತಾ, ಗಿರಿರಾಜನು ಸಪ್ತಋಷಿಗಳನ್ನು ಕೇಳಿದೊಡನೆ—

೮. (ಆ) ವರಮುನಿಗಳು (ತಮ್ಮ) ಮನಸ್ಸಿನ ಒಂದು ಆದರದಿಂದ ನುಡಿದರು: "ಶಿವನು, ಶಶಾಂಕ(ಚಂದ್ರ)ನನ್ನು ಧರಿಸಿದನು, ಶಂ(ಶುಭವನ್ನು)ಕರಂ (ಮಾಡುವವನು), ಅಭವನು, ನಿರ್ಮಾಯನು ಗಿರಿಜೆಯನ್ನು ಬೇಡಬೇಕೆಂದು ತಿಳಿಸಿ, ನಮ್ಮನ್ನು ಕಳಿಸಿದನು—

೯. "ಆತನಿಗೆ, ಚಂದ್ರಮೌಳಿಗೆ, ಅಜಾತನಿಗೆ, ನಿರಾಮಯನಿಗೆ, ನಿತ್ಯನಿಗೆ, ನತವ್ರಾತ(ಭಕ್ತರ ಗುಂಪು ನಮಿಸಿದವ)ನಿಗೆ, ನೂತನ(ಹೊಸ) ಭುವನ(ಕ್ಕೆ) ಏಕಭಾಗ್ಯವತಿ (ಯಾದ) ಪಾರ್ವತಿಯನ್ನು ಬೇಡಲು ಬಂದೆವು—

೧೦. "ಚಂದ್ರಧರನಿಗೆ, ನತ (ನಮಸ್ಕರಿಸುವ ಭಕ್ತರೆಂಬ) ಉತ್ಪಲ (ಗಳಿಗೆ) ಚಂದ್ರ(ನಾದವ)ನಿಗೆ, ಗಣಸಮೂಹದ ನಯನ (ಕಣ್ಣುಗಳೆಂಬ) ಚಕೋರ(ಪಕ್ಷಿಗಳಿಗೆ) ಸು(ಒಳ್ಳೆಯ) ಚಂದ್ರ(ನಾದವ)ನಿಗೆ ಚಂದ್ರ(ನಂತೆ) ಆನನ (ಮುಖ)ವುಳ್ಳ ಶಿವೆ(ಪಾರ್ವತಿ)ಯನ್ನು ಒಲಿದು (ಮದುವೆ ಮಾಡಿ) ಕೊಡು, ಗಿರಿರಾಜಾ!"

ಎಂದು ಸಪ್ತಋಷಿಗಳು ನುಡಿದ ಆಪ್ತವಚನವನ್ನು ಕರ್ಣ (ಕಿವಿಗಳಿಗೆ) ರಸಾಯನ (ಸವಿಯೂಟ)ವಾಗಿ ಗಿರಿರಾಜನು ಕೇಳಿ, ಅಳವಿ (ಅಳತೆ) ಕಳಿದ (ಇಲ್ಲದ) ಸಂತಸ (ಸಂತೋಷ)ವನ್ನು ಸಂತೈಸಿ (ಅಡಗಿಸಿ)ಕೊಳ್ಳ ಲಾರದೆ ಹೆಚ್ಚಿ ಹಿಗ್ಗಿ, "ಶರ್ವ(ಶಿವ)ನಿಗೆ ಪಾರ್ವತಿ ಎರವೆ (ಬೇರೆಯಾದ ವಳೆ?) ಪನ್ನಗ (ಹಾವನ್ನು) ಆಭರಣವಾಗಿ ಉಳ್ಳವನು (ಶಿವನು) ನನ್ನನ್ನು (ಇದಕ್ಕಾಗಿ ಬೇಡಬೇಕೆ?) ಸರುಚಿಯಿಂ (ಇಷ್ಟಪಟ್ಟು), ಸಾಂಗೀಕಾರದಿಂ (ಒಪ್ಪಿ), ಕಾಮುದಿಂ (ಆಸೆಯಿಂದ), ಪ್ರೇಮದಿಂದ, ನಿಷ್ಠೆಯಿಂದ ನೆಟ್ಟನೆ ಕೊಟ್ಟೆನು, ಕೊಟ್ಟೆನು. ಎರಡು (ಬೇರೆ ಮಾತು) ಇಲ್ಲ." ಎಂದು ಸತ್ಯವಚನವನ್ನು ಸಂತೋಷದಿಂದ ನುಡಿದು, ಸಪ್ತಋಷಿ ಗಳ ಚರಣಕ್ಕೆ ಮತ್ತೆ ಮತ್ತೆ ಎರಗುತ್ತಾ, ಅವರನ್ನು ಹರಿಸ (ಹರ್ಷ) ದಿಂದ ಕಳುಹಿ, ಗಿರಿರಾಜನು ಮಹಾ ಉತ್ಸವದಿಂದ ಮಹಾ ವಿವಾಹ ಮಂಟಪ ಆದಿ (ಮೊದಲಾದ) ಸಮಸ್ತ ವಸ್ತುಗಳನ್ನು ವಿಸ್ತರಿಸುತ್ತಿದ್ದನು.

೨

ವಜ್ರದಂತ ಚಕ್ರವರ್ತಿ ವಜ್ರಬಾಹು ನೃಪನನ್ನು "ನಿನಗೆ ಯಾವುದು ಮನೋರಥ? ಅದನ್ನು ಬೇಡಿಕೋ" ಎನ್ನಲು—

೧೧. "ನಿಮ್ಮ ದಯೆಯಿಂದ ಉಳಿದ ಯಾವುದೂ ನನಗೆ ಅರಿದು (ಅಸಾಧ್ಯವಾದದ್ದು) ಉಂಟೆ? ಎಲ್ಲವೂ ಉಂಟು. (ಆದರೂ) ನರೇಂದ್ರ (ರಾಜರುಗಳ) ಮೌಳಿ(ಕಿರೀಟಗಳ) ಮಣಿ (ರತ್ನಗಳ) ರಾಜಿ (ಪಂಕ್ತಿ ಯಿಂದ) ವಿರಾಜಿತ (ಬೆಳಗುವ) ಪಾದಪೀಠವುಳ್ಳವನೆ, ನೀನು ನನಗೆ ನೆಟ್ಟನೆ ದಯೆಗೈವುದಾದರೆ, ನಿಜ (ನಿನ್ನ) ತನೂಜೆಯಂ(ಮಗಳನ್ನು), ಉತ್ಸವ ಮಂಗಳದ ಆನಕ (ತಮಟೆಯ) ಧ್ವನಿ ದೆಸೆ(ದಿಕ್ಕು)ಗಳನ್ನು ಪಳಂಚಲೆ (ಹೋಗಿ ತಾಗು)ವಂತೆ, ಈಗಲೇ ಈ ವಜ್ರಜಂಘನಲ್ಲಿ ನೆರಪು (ಮದುವೆಮಾಡಿಕೊಡು.)

ಎನ್ನಲಾಗಿ, ಚಕ್ರಧರಂ (ವಜ್ರದಂತ ಚಕ್ರವರ್ತಿ) ಅಧರಕಿಸಲಯದ (ಚಿಗುರಿನಂತಿರುವ ತುಟಿಗಳ)ಮೇಲೆ ದಂತ (ಹಲ್ಲುಗಳ) ಕಾಂತಿ(ಎಂಬ) ಲತಾಂತ (ಮೊಗ್ಗಿನ) ಪ್ರಭೆಗಳು ಪಸರಿಸಲು—

೧೨. "ಕೂಸಿಂಗೆ (ನನ್ನ ಮಗಳಿಗೆ) ಒಡೆಯಂ (ನಿನ್ನ ಮಗನೇ ಪತಿ.) ಅದು ಒಂದೇ ಕುಲದ ಚಲದ ಪೆಂಪು(ಆಧಿಕ್ಯ)ಒಂದೇ, ಚೆಲುವು ಒಂದೇ, ಸಂದ (ಕೂಡಿದ) ಒಳ್ನುಡಿ (ಕೀರ್ತಿ) ಒಂದೇ, ವಿದ್ಯೆ ಒಂದೇ, ಪುದಿದು (ತುಂಬಿ) ಒದವಿದ (ಹೊಂದಿಕೊಂಡ) ಜನ್ಮಾಂತರ (ಹಿಂದಿನ ಜನ್ಮಗಳಿಂದ ಬಂದ) ಸ್ನೇಹ ಒಂದೇ! ಪೆರರ್ಗೆ (ಇತರರಿಗೆ) ನುಡಿಯಲ್ (ಮನಸ್ಸು ಬಂದಂತೆ ಮಾತನಾಡುವುದಕ್ಕೂ) ಪಿಕ್ಕಲ್ಕೆ(ತಪ್ಪು ಕಂಡು ಹಿಡಿಯುವುದಕ್ಕೂ) 'ಅದು ಒಂದು ಅಲ್ತು (ಅಲ್ಲ)' ಎನ್ನುವುದಕ್ಕೂ ಎಡೆ (ಅವಕಾಶ) ಇನ್ನು ಇಲ್ಲ. ಮುನ್ನ (ಈ ಮೊದಲೇ) ಆ ವಿಧಾತ್ರಂ (ವಿಧಿಯು) ಕನ್ನೆಯಂ (ತಾನೇ) ಕುಡಲ್ ಇರ್ದಂ (ಕೊಡಲು ಉದ್ದೇಶಿಸಿದ್ದನು) (ಹೀಗಿರುವಾಗ) ನಿನಗೂ ನನಗೂ ದಂದುಗಂ (ಚಿಂತೆ) ಏಂ(ಏನು?) ವಜ್ರಬಾಹೂ?

"ಅದೂ ಅಲ್ಲದೆ—

೧೩. "ಬಾಲ(ಎಳೆಯದಾದ) ಸಹಕಾರ(ಮಾವಿನ) ತರು(ಮರವು) ನವ(ಹೊಸ) ಮಾಲತಿ(ಬಳ್ಳಿ)ಗೆ, ಅತಿ ಲಲಿತ(ಕೋಮಲ)ವಾದ ಪೂಗ (ಅಡಿಕೆಯ)ಭೂಜಾತಂ (ಮರವು) ತಾಂಬೂಲ (ವೀಳೆಯದೆಲೆಯ) ಲತೆ (ಬಳ್ಳಿ)ಗೆ [ಅನುರೂಪ] ಎಂಬ ಹಾಗೆ—ಸಮಾನವಾದ ಲೀಲೆ (ನಡತೆ) ಉಳ್ಳ ನಿಜತನಯನೆ (ನಿನ್ನ ಮಗನೇ) ನನ್ನ ತನುಜೆ (ಮಗಳ)ಗೆ ತಕ್ಕಂ (ಯೋಗ್ಯನು)

೧೪. "ಈಗ ಧಾರಿಣಿ(ಭೂಮಿ)ಯಲ್ಲಿ ಈಕೆಯೆ ಸ್ತ್ರೀರತ್ನವು, ಈತನೆ ಪುರುಷರತ್ನನು. ಸದೃಶವಾದ ಆಕಾರವುಳ್ಳ ಇವರನ್ನು ಕೂಡಿ(ದಂಪತಿಗಳನ್ನಾಗಿ ಮಾಡಿ)—ಪಯೋರುಹಜಂಗೆ (ಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೆ) ಸಮಸಮಾಯೋಗ (ಸಮವಾದುದನ್ನು ಸಮವಾದದ್ದರೊಡನೆ ಸೇರಿಸಿದ) ಯಶಸ್ಸು ಅಕ್ಕೆ (ಉಂಟಾಗಲಿ)"

ಎಂಬುದುಂ (ಹೀಗೆನ್ನಲಾಗಿ), ವಜ್ರಬಾಹುವು ವಜ್ರದಂತನ ಸೂಕ್ತ (ಚೆನ್ನಾಗಿ ಹೇಳಿದ ಮಾತುಗಳೆಂಬ) ಅಮೃತದಿಂದ ಸಿಕ್ತಮಪ್ಪ (ನೆನೆದ) ನಿಜ (ತನ್ನ) ಮನೋರಥವೆಂಬ ಅಮರದ್ರುಮ(ಕಲ್ಪವೃಕ್ಷ)ದಿಂದ ಒಗೆದು (ಹುಟ್ಟಿ) ಅಂಕುರಿಸಿದ (ಮೊಳಕೆಬಿಟ್ಟ) ಅಂಕುರನಿಕರ (ಮೊಳಕೆ

ಗಳ ಸಮೂಹ)ವನ್ನು ಅನುಕರಿಸುವ ರೋಮಾಂಚದ ನಿಚಯದಿಂ (ಪರಂಪರೆಯಿಂದ) ನಿಚಿತ(ಮುಚ್ಚಿದ) ಅಂಗನ್(ಮೈಯುಳ್ಳವನು)ಆಗಿ—

೧೫. "ಇದು (ಈ) ಪ್ರಣಯಂ (ಪ್ರೀತಿ) ಅನನ್ಯ ಸಾಧಾರಣ ವಾದುದು. (ಹೀಗೆ) ಎನ್ನಿಸುವ ಭವತ್ (ನಿನ್ನ) ಪ್ರಸಾದ (ಅನುಗ್ರಹ) ಎಂಬ ಅಮೃತದಿಂದ ನಾನು ತಣಿದೆ (ತೃಪ್ತಿಪಟ್ಟೆ)ನು. ಭೂಭುವನದಲ್ಲಿ (ಸಮಸ್ತ ಜಗತ್ತಿನಲ್ಲಿ) ನನಗೆ ಯಾರು ಎಣೆ (ಸಮ)?" ಎಂಬ ಒಂದು ಸಂತಸ(ಸಂತೋಷ)ಕ್ಕೆ ಎಡೆಯಾದನು

## ವಿವಾಹಮಂಟಪ–ಮಂಗಲದ್ರವ್ಯ–ವರ್ಣನ

೧ ಆ (ಮದುವೆಯ) ನಿವಾಸ(ಗೃಹ)ದಲ್ಲಿ ಜಾಗದ (ನೆಲಕ್ಕೆ ಹಾಸಿದ ಪಚ್ಚೆಯ ಕಲ್ಲಿನ) ಪಸುರ್ಪು (ಹಸಿರು) ಹರಿತ್ (ಪಚ್ಚೆಯ) ಅಶ್ಮ (ಕಲ್ಲಿನ) ಭಿತ್ತಿ (ಗೋಡೆಗಳ) ಜಾಲ(ಸಮೂಹದ) ಹಸುರಿಂದ, ಕಡೆಯ (ರಂಗ ವಲ್ಲಿಯಾಗಿ) ಇಕ್ಕಿದ (ಹಾಕಿದ) ಮುತ್ತಿನ ಬಿಳುಪು ಉಪಹಾರ(ವಾಗಿ ಕೆದರಿದ) ಮನೋಹರವಾದ ಪ್ರಸೂನ (ಪುಷ್ಪ)ದ ಕಡು (ಅಚ್ಚ) ಬಿಳುಪಿನಿಂದ, ಮಾಣಿಕ್ಯದ ಕಂಬದ ಕೆಂಪುಬೆಳಕು ರತ್ನದೀಪದ ಬೆಳಕಿನಿಂದ, (ಮೊದಲೇ) ಉಂಟಾಗಿದ್ದ ಚೆಲುವು ನೂರ್ಮಡಿಸುವಂತೆ ನೂರ್ಮಡಿಸುತ್ತಿತ್ತು.

೨ ಮಿಸುಗುವ (ಹೊಳೆಯುವ) ಚೌಕದ (ನಾಲ್ಕು ಮೂಲೆಯ) ಮುತ್ತಿನ ಹನೆಗೆ ಹಾಸಿದಂಥ ಪಟ್ಟವಳಿಯ ವಸ್ತ್ರದ ರುಚಿ (ಕಾಂತಿಗಳು) ಪಸರಿಸಲು—ಹೊನ್ನಿನ ಜಗುಲಿ ಗಾಂಗ(ಗಂಗೆಯ ದಡದ) ತುಂಗ (ಎತ್ತರವಾದ) ಪುಳಿನ (ಮರಳಿನ) ಶ್ರೀಪೋಲ್ (ರಾಶಿಯ ಹಾಗೆ) ವಿರಾಜಿಸುತ್ತಿದ್ದುದು.

೩ ಮಸೆವಟ್ಟ (ಚೆನ್ನಾಗಿ ಉಜ್ಜಿದ) ಉಜ್ಜ್ವಲ (ಹೊಳೆಯುವ) ದರ್ಪಣಂ (ಕನ್ನಡಿ), ಹೊಸ ತಳಿರ್ (ಚಿಗುರು), ಹೂವಿನ ಮಾಲೆ, ಶೇಷಾಕ್ಷತೆ, ಬಿಸಸೂತ್ರಂ (ತಾವರೆ ದಂಟಿನ ನೂಲು), ಸಿತದೂರ್ವೆ (ಬಿಳಿಯ ಗರಿಕೆ), ನೂತನ (ಹೊಸ) ಯವ (ಜವೆಯಿಂದಾದ) ಗ್ರೈವೇಯಕ (ಹಾರ)—(ಇವು) ತನ್ನಲ್ಲಿ ಒಪ್ಪಿರಲು; ಸಮಸ್ತ(ವಾದ) ಓಷಧಿ,

ಪಂಚರತ್ನ ಇವುಗಳೊಡನೆ ಪೂತ (ಪವಿತ್ರವಾದ) ಅಂಬು (ನೀರಿನಿಂದ) ಪೂರ್ಣಂ (ತುಂಬಿದ) ಅಂಚಿತ (ಕೆತ್ತನೆಯ ಕೆಲಸ ಮಾಡಿದ) ಶಾತ ಕುಂಭಮಯ (ಚಿನ್ನದಿಂದಾದ) ಕುಂಭವು ವೇದಿಕಾ (ಜಗುಲಿಯ) ಮಧ್ಯ ದಲ್ಲಿ ವಿರಾಜಿಸಿತ್ತು.

೪. ಸಾರ (ವಸ್ತುಗಳನ್ನುಳ್ಳ) ಸುವರ್ಣ (ಚಿನ್ನದ) ವೇದಿಕೆ (ಜಗುಲಿ), ದುಕೂಲ (ಪಟ್ಟವಸ್ತ್ರಗಳ) ವಿತಾನ (ಪಂಕ್ತಿ), ಅಪೂರ್ವವಾದ ಭೃಂಗಿ ಭೃಂಗಾರ ಘಟ (ಎಂಬ ಬೇರೆ ಬೇರೆ ರೀತಿಯ ಪಾತ್ರೆಗಳ) ಆಳಿ(ಸಾಲು), ಪೂರ್ಣ (ತುಂಬಿದ) ಕಲಶ, ಮಣಿ (ಕೆಂಪುರತ್ನದ) ದೀಪಿಕೆ (ಸಣ್ಣದೀಪ), ಪಲ್ಲವ (ಚಿಗುರಿನ) ಉಲ್ಲಸತ್ (ನಗುನಗುವ) ತೋರಣ, ಉನ್ನತವಾದ ಧ್ವಜ—ಎನ್ನಿಸುವ ಇವು ಮಂಗಳಲಕ್ಷ್ಮಿ ತೊಟ್ಟ ಆಲಂಕಾರ(ಗಳ) ನಿಕಾಯದ(ಗುಂಪಿನ) ಹಾಗಿರಲು, ವಿವಾಹಮಂಟಪವು ಮನೋಹರ ವಾಯಿತು.

೫. ಜವೆ(ಯವೆ), ದಿವ್ಯವಾದ ಓಷಧಿ, ಪಾರಿಜಾತದ ಕುಸುಮ, ಸಿದ್ಧಾರ್ಥಂ (ಬಿಳಿಯ ಸಾಸಿವೆ), ಆರ್ದ್ರ (ನೆನೆದ) ಅಕ್ಷತೆ, ಧವಳ (ಬಿಳು ಪಾದ) ಅಬ್ಜ (ತಾವರೆ), ಸಿತ (ಬಿಳುಪಾದ) ದೂರ್ವೆ (ಗರಿಕೆ), ನೂತನ (ಹೊಸ) ಫಲ (ಹಣ್ಣು), ಗೋರೋಚನ, ಲಾಜೆ (ಅರಳು), ಬಣ್ಣವುರ (ತೊಡೆದುಕೊಳ್ಳುವ ಬಣ್ಣ), ರನ್ನದ (ಕೆಂಪಿನ) ತಂಪಾದ ಸೊಡರು (ದೀಪ), ಮಲಯಜ(ಚಂದನ), ಕಸ್ತೂರಿ, ಕಾಶ್ಮೀರ (ಕೇಸರಿ)—ಎಂಬ ಇವುಗಳಿಂದ ತೆಕ್ಕನೆ (ದಟ್ಟವಾಗಿ) ತೀವಿ (ತುಂಬಿ), ಪೊನ್(ಚಿನ್ನದ) ಪರಿಯಣಂ (ಹರಿವಾಣ, ದೊಡ್ಡತಟ್ಟೆ) ಆ ಸದ್ಮ (ವಿವಾಹಗೃಹ)ದಲ್ಲಿ ಚೆಲುವಾಯಿತು.

## ವರನ ಮಂಗಳಾಚಾರ

೧

ಆ (ವಿವಾಹ) ಮಹೋತ್ಸವದಲ್ಲಿ ವನಮಾಲಿ(ಯಾದ ಕೃಷ್ಣನು) ಮಜ್ಜನಶಾಲೆ(ಸ್ನಾನದ ಮನೆ)ಗೆ ಬಿಜಯಮಾಡಿ ಮಜ್ಜನಪೀಠವನ್ನು ಅಲಂಕರಿಸಿದಾಗ—

೧. ಉಗುರಿನ ಕೊನೆ ಸೋಕದಂತೆ ಉಗುರಿಸುವ (ಉಗುರಿನಿಂದ ಸಿಕ್ಕು ಬಿಡಿಸುವ) ಓಜೆ(ಕ್ರಮ), ತರಂತರದಿಂ(ತೆರತೆರನಾಗಿ)ಶಿರೋಜಮಂ (ತಲೆಗೂದಲನ್ನು) ನೆಗಪುವ (ಮೇಲೆತ್ತುವ) ಭಂಗಿ(ಠೀವಿ), ಬಿತ್ತರ (ವಿಸ್ತಾರ)ದಿಂದ ಎತ್ತುವ ಕೆಂದಳದ(ಕೆಂಪಾದ ಅಂಗೈಯ) ಒಂದು ಲಾಘವ(ಚಳಕ)—(ಇವು) ಸೊಗಯಿಸುತ್ತಿರುವಂತೆ (ಒಬ್ಬಳು) ಮೃಗ ಮದಗಂಧಿ(ಕಸ್ತೂರಿಯ ಸುವಾಸನೆಯು ವ್ಯಾಯವಳು) (ಕೃಷ್ಣನ) ಸಹಜ ವಾದ ದಿವ್ಯಸುಗಂಧದ ಕೇಶಪಾಶಮಂ (ಉದ್ದವಾದ ತಲೆಗೂದಲಿಗೆ) ಉಪಾಸಿತ ಚಂಪಕಗಂಧತೈಲಮಂ (ಸಂಪಗೆಯ ವಾಸನೆಯನ್ನು ಕಟ್ಟಿದ ತೈಲವನ್ನು) ಪೂಸಿದಳು.

೨ (ಕುಪ್ಪಸದಿಂದ) ಬಿಗಿದ ಉತ್ತುಂಗ(ಮೇಲೆದ್ದ)ಕುಚಂ(ಮೊಲೆಯು) ಕದಕ್ಕದಿಸೆ (ಭಾರದಿಂದ ಎದ್ದೆದ್ದು ಕುಣಿಯಲು), ಹಾರವು ತೂಗಾಡಲು, ಕಣ್ಣಿನ ಚೆಲ್ಲಂ (ನಗೆಯ ನೋಟ) ಅಲ್ಲಿ ಉಗೆ(ಉಕ್ಕಲು), ಪೊನ್ (ಚಿನ್ನದ) ಓಲೆ ಕದಂಪಂ (ಕೆನ್ನೆಯನ್ನು) ಅಪ್ಪಳಿಸಲು, ಮಧ್ಯಂ (ನಡುವು) ಬಳುಕಲು, ಘರ್ಮ(ಬೆವರಿನ) ಅಂಬು (ನೀರು) ಕೈಮಿಗೆ (ಹೆಚ್ಚಾಗಲು), ಯೋಷಿತ್‌ಜನಂ (ಸ್ತ್ರೀಜನರು)—ಸುಹೃತ್‌ಜನಂ (ಸ್ನೇಹಿತರು) ಮಂಗ ಳಾಚಾರವನ್ನು ವಿರಚಿಸುವಷ್ಟರಲ್ಲಿ—ಕಣ್ಗೊಂಡು (ದೃಷ್ಟಿಸಿ) ಜಗತ್ತಿನ ಜನರಿಗೆ ಏಕವಿಭು(ಸ್ವಾಮಿ)ಯಾದ'(ಶ್ರೀಕೃಷ್ಣನನ್ನು)ಅಂದು ಮಜ್ಜನಂ ಬುಗಿಸಿತ್ತು(ಸ್ನಾನಮಾಡಿಸಿತು)

ಅನಂತರ, ನೈಪಥ್ಯ(ಅಲಂಕಾರಮಾಡಿಕೊಳ್ಳುವ) ನಿಲಯಕ್ಕೆ ಬಂದು, ಅಲ್ಲಿ—

೩. ಮನಸ್ಸನ್ನು ಅರಳಿಸುತ್ತಿರುವ ನವ(ಹೊಸ)ಪುಷ್ಪಗಳ ಸಮೃದ್ಧಿ (ಯೂ) ವಸಂತ(ಕಾಲದ) ಚೂತ(ಮಾವಿನ) ನಂದನಂ (ತೋಟವು) ಅಲರು(ಹೂಬಿಡು)ವಂತೆ (ಇರುವ) ಮಾಂಗಳಿಕ (ಮಂಗಲ ಸಂಬಂಧಿ ಯಾದ) ಸಾರಧನ(ವೂ) ಧವಳ(ಬಿಳುಪಾದ) ಪ್ರಸಾಧನ (ಅಲಂಕಾ ರವೂ) ತನಗೆ ಅಮರ್ದು (ಹೊಂದಿಕೊಂಡು) ಒಪ್ಪಲು—ತತ್ (ಆ) ವಿಮಲ(ಸ್ವಚ್ಛವಾದ) ಮೌಕ್ತಿಕ (ಮುತ್ತಿನ) ಮಂಡನ (ಆಭರಣಗಳ) ಕಾಂತಿಯ ಪೂರ(ಪ್ರವಾಹ)ದಿಂದ ಮುಕುಂದನು ಅಮೃತದ (ಹಾಲಿನ)

ಅಬ್ಧಿಯೊಳ್ (ಸಮುದ್ರದಲ್ಲಿ) ಇರುವ ನಿಜ (ತನ್ನ) ಆದಿಮೂರ್ತಿಯನ್ನು ನೆನೆಯಿಸಿದಂ (ಜ್ಞಾಪಕಕ್ಕೆ ತಂದನು)

೨

ಆಗ ಪಂಚರತ್ನ(ಗಳನ್ನು) ಗರ್ಭ(ಒಳಗಡೆ ಉಳ್ಳದ್ದೂ) ವಿವಿಧವಾದ ಓಷಧಿ(ಗಳಿಂದ) ಸಂದರ್ಭ (ಕೂಡಿದ್ದೂ ಆದ) ಶಾತಕುಂಭ (ಚಿನ್ನದ) ಕುಂಭ (ಕೊಡಗಳಲ್ಲಿ) ಸಂಭೃತ(ತುಂಬಿದ್ದ) ಮಂಗಳಜಲಗಳಿಂದ ಮಿಸಿಸೆ (ಸ್ನಾನಮಾಡಿಸಲು), (ವರನು) ಮಿಂದು (ಸ್ನಾನಮಾಡಿ), ಅಲಂಕಾರ ಮಂದಿರಕ್ಕೆ ಬಂದು, ನೆರೆಯೆ (ತುಂಬಾ) ಕೈಗೆಯ್ಯೆ (ಅಲಂಕರಿಸಲು)—

೪ (ಅರಿಸಿನದ) ಕರೆ (ಗುರುತಿನಿಂದ) ಬೆರಸಿದ (ಕೂಡಿದ) ಹೊಸ ದುಕೂಲ (ಪಟ್ಟೆವಸ್ತ್ರ)ದ ತೆರಳ್ಕೆ ವೆತ್ತ (ಮಡಿಕೆ ಹಿಡಿದ)ಉಡೆ(ಧೋತ್ರವು) ಹಟತ್ (ಚಿನ್ನದ) ಕಟಿಸೂತ್ರ(ಉಡಿದಾರ)ದ ಪರಿಸ್ಫುರಿತದೊಳಂ (ಪ್ರಕಾಶದಿಂದಲೂ) ಕಟ್ಟಿದ ಪೊನ್ನ (ಚಿನ್ನದ) ಸುರಿಗೆಯೊಳಂ (ಕತ್ತಿಯಿಂದಲೂ)ಜನವನ್ನು ಏನು ಮನಂಗೊಳಿಸಿದುದೋ (ಆಕರ್ಷಿಸಿತೋ!)

೫. ತರಳತರ (ತುಂಬ ಮಿನುಗುವ) ವೃತ್ತ (ಗುಂಡಾದ) ಮೌಕ್ತಿಕ (ಮುತ್ತಿನ) ಪರಿಕರಂ (ಜೋಡಣೆಯಿಂದ) ಏಕಾಂತಕಾಂತಂ (ಕೇವಲ ಸುಂದರವಾದ) ಏಕಾವಳಿ (ಒಂದೆಳೆ ಸರವು) ಕಂಧರ (ಕುತ್ತಿಗೆ)ಯಲ್ಲಿ ಆಮರ್ದು (ನೇರಿಕೊಂಡು) ಎಸೆಯಲು—(ಆ ವರನ) ಮುಖಚಂದ್ರವು ಪರಿವೇಷಂಗೊಂಡ (ಸುತ್ತಲೂ ಬೆಳಕಿನ ಪ್ರಭಾವಳಿಯನ್ನು ಹೊಂದಿದ) ಚಂದ್ರನನ್ನು ಹೋಲಿತು.

೬. 'ಹಿಮವದ್ಗಿರಿಯ ಕಟಕ(ತಪ್ಪಲುಭಾಗ)ದಿಂದ ಒಗೆ(ಹುಟ್ಟು)ವ ಅಮರಸರಿತ್ (ದೇವನದಿಯಾದ ಗಂಗೆಯ) ಸ್ರೋತ(ಪ್ರವಾಹ)'ಎಂಬ ಮಾತನ್ನು ಪಡೆದು, ಹಿಮಶೈಲದ ಶಿಲೆಯಂತೆ ವಿಶಾಲವಾದ (ಆ ವರನ) ವಕ್ಷಃಸ್ಥಳದಲ್ಲಿ ಹಿಮ(ದಂತೆ) ಗೌರ(ಬಿಳುಪಾದ) ಹಾರವು ಏಂ (ಏನು ಲಕ್ಷಣವಾಗಿ) ಎಸೆಯಿತೊ (ಕಂಗೊಳಿಸಿತೊ!)

೭. 'ಶ್ರೀಮತಿಯ ಮನಸ್ಸನ್ನು ಎರಗಿಸಲು (ಒಲಿಸಿಕೊಳ್ಳಲು) ಈ ಮಣಿಮಯವಾದ ಮಕುಟ (ಕಿರೀಟವು) ಆಗಳುಂ (ಯಾವಾಗಲೂ) ಸಾಲುವುದೇ? ತತ್(ಆ) ಕೋಮಲೆ ಮುಳಿದಿರೆ (ಕೋಪಿಸಿಕೊಂಡಿರು

ವಾಗ) ತಿಳಿಪಲ್ಕೆ'(ಕೋಪವನ್ನು ತಿಳಿಸುವುದಕ್ಕೆ) ಈ ಮಕುಟ(ಕಿರೀಟ)ವೆ ಸಾಲ್ಗುಂ (ಸಮರ್ಥವು)' ಎನ್ನಿಸುವಂತೆ (ಆವನು ಧರಿಸಿದ) ಮಕುಟವು ಆರ್ತುದು (ಸಮರ್ಥವಾಯಿತು)

೮. ಕೇಯೂರ (ತೋಳಬಂದಿ) ಕಟಕ (ಕಡಗ ಇವುಗಳ) ಸಮಿತಿ (ಮೊತ್ತವು) ಯುಗ (ನೊಗದಂತೆ) ಆಯತ (ಉದ್ದವಾದ) ಬಾಹು (ತೋಳು)ಗಳಿಂದ ಉಸ್ಮಿಷತ್ (ತೆರೆದಿಟ್ಟ) ರತ್ನ ಮತ್ತು ಹಟತ್ (ಚಿನ್ನದ) ಛಾಯೆಯಿಂದ ದೇಹದ ಛಾಯೆ(ಕಾಂತಿ)ಯನ್ನೂ ಮುಸುಕಿ ಪುದಿಯೆ (ತುಂಬಿಬಿಡಲು), (ಆ ವರನು) ರತ್ನದ ತರು(ಮರ)ವನ್ನು ಹೋಲಿದನು.

೯. ಇದು ಮನಸಿಜ(ಮನ್ಮಥ)ನ ಅಂಗನಾಜನ (ಸ್ತ್ರೀಯರನ್ನು) ವಶೀಕರಣ (ವಶಪಡಿಸಿಕೊಳ್ಳುವ) ಓಷಧ (ಮೂಲಿಕೆ), (ಇದು) ಅಂಗಜನ (ಮನ್ಮಥ)ನ ಅಂಬಿನ (ಬಾಣದ) ಮದಶಕ್ತಿ, (ಇದು) ಮನ್ಮಥನ ಮೋಹನ ಯಂತ್ರ ಅಪ್ಪುದು (ಆಗುತ್ತದೆ, ಹೌದು;) ಅಲ್ಲದಂದು (ಹಾಗಿಲ್ಲದಿದ್ದರೆ), ಇನಿತುವರಂ (ಇಷ್ಟರಮಟ್ಟಿಗೆ) ಮನಂಗೊಳಿಸದು (ಮೆಚ್ಚಿಕೆಯಾಗದು)—ಎಂಬಿನಂ (ಎನ್ನುವಂತೆ) ವಜ್ರಜಂಘನ ಉಜ್ಜ್ವಲವಾದ ಮಂಗಳಪ್ರಸಾಧನ(ಅಲಂಕಾರ)ವೇ ಮನೋಜ (ಮನ್ಮಥನೆಂಬ) ರಾಜನ ಜಯ(ಕ್ಕೆ) ಸಾಧನವಾಯಿತು.

## ವಧುವಿನ ಮಂಗಳಾಲಂಕಾರ

### ೧

ಅನ್ನೆಗಂ (ಅಷ್ಟರಲ್ಲಿ) ಇತ್ತ—

೧. ಮಂಗಳ ಪಟಹ (ತಂಬಟೆಗಳ) ಸ್ವನ(ಧ್ವನಿ)ಯು ದಿಕ್ಕುಗಳ ದಡವನ್ನು ಪಳಂಚೆ (ಹೋಗಿತಾಗಲು), ಮಂಗಳಗಾಯಕರ ಗೀತಗಳ ನಿಸ್ವನವು (ದಿಕ್ತಟವನ್ನು) ಪುದಿಯೆ (ತುಂಬಲು), ವಿಲಾಸವತಿಯಾದ ಸೀತೆಗೆ ವಿವಾಹ(ದಲ್ಲಿ) ಮುಖ್ಯ ಮಂಗಳ(ವಾದ) ಸವನ (ಅಭಿಷೇಕವು) ಮಳಯಜ (ಚಂದನದಿಂದ) ಮಿಶ್ರ (ಬೆರೆತ) ತೀರ್ಥ (ಪವಿತ್ರ ಕ್ಷೇತ್ರದ) ಜಲದ ಧಾರೆಗಳಿಂದಲೂ ಶಶಿಕಾಂತ (ಚಂದ್ರಕಾಂತಶಿಲೆಯಿಂದ ಮಾಡಿದ)

ಮಂಗಲ ಕಲಶ(ಗಳ) ಅಂಶು (ಕಿರಣಗಳ) ಧಾರೆಗಳಿಂದಲೂ ಇರ್ಮಡಿಸಿತ್ತು (ಎರಡರಷ್ಟಾಯಿತು)

೨ ಮಲಯಜ (ಚಂದನದ) ಹಿಮ (ತಂಪಾದ) ಕರ್ದಮ (ಕೆಸರಿನಿಂದ) ಕಲಿಲ (ಕೂಡಿದ) ಸಲಿಲ (ನೀರಿನಿಂದ) ಸವನ (ಅಭಿಷೇಕವಾಗುವ) ಉತ್ಸವ(ಕಾಲ)ದಲ್ಲಿ—ಮೃಗ (ಜಿಂಕೆಯಂತೆ) ನೇತ್ರ (ಕಣ್ಣುಗಳುಳ್ಳ ಆ ಸೀತೆ), ಹಿಮಕಿರಣಮಾಲೆ (ಬೆಳುದಿಂಗಳು) ಮುಸುಕಿದ ಕುಮುದಿನಿ(ಕನ್ನೈದಿಲೆ)ಯ ಬೆಡಗು ತನಗೆ ಪುದುವು (ಉಂಟಾಯಿತು) ಎಂಬಂತೆ, ಮನಂಗೊಂಡಳ್ (ಆಕರ್ಷಕವಾಗಿ ತೋರಿದಳು)

ಆ ಮಂಗಲ ಸವನ (ಸ್ನಾನ) ಸಮಯದ ಅನಂತರ ಜಾನಕಿ ನೀರಾಜನ (ದೀಪದಂತೆ) ವಿರಾಜಮಾನೆ (ಹೊಳೆಯುವವಳು) ಧಾರಾನಿಲಯದ ಜಲಯಂತ್ರದ ಪುತ್ರಿಕೆ(ಬೊಂಬೆ)ಯಂತೆ ನಯನ (ಕಣ್ಣಿನ) ಪುತ್ರಿಕೆ(ಬೊಂಬೆ)ಗೆ ಮಣಿಭೂಷಣವೆನ್ನಿಸಿ, ಪಳಿಕ (ಸ್ಫಟಿಕದ) ಪಟ್ಟದ ಮಣೆ (ತನ್ನ) ಕೇಸಡಿಯ (ಕೆಂಪಾದ ಅಂಗಾಲಿನ) ಕೆಂಪಿನಿಂದ ಅರುಣ (ಕೆಂಪಿನ) ಮಣಿಗಳನ್ನು ಒಟ್ಟೈಸೆ (ಕೂಡಿಸಿಕೊಳ್ಳುವಂತೆ) ಮೆಟ್ಟನಿಲ್ಲುವುದೂ; ಆ ನಿತಂಬಿನಿ(ಕನ್ಯೆ)ಯ ನಿತಂಬಸೂತ್ರ(ಉಡಿದಾರ)ದಲ್ಲಿ ತೊಡರಿಸಿದ ತೋರ (ಗಾತ್ರವಾದ) ಮುತ್ತುಗಳಂತೆಯೂ, ಆ ವೃತ್ತ (ಗುಂಡಾದ) ಕುಚೆಯ (ಮೊಲೆಯಿರುವವಳ) ಕುಚಕಲಶದಲ್ಲಿ ಒಸರು (ತೊಟ್ಟಿಕ್ಕು)ವ ಲಾವಣ್ಯರಸದ ಬಿಂದು(ಹನಿ)ಗಳಂತೆಯೂ, ಆ ಕನಕ (ಚಿನ್ನದ) ಕೇತಕೀ (ತಾಳೆಯ ಹೂವಿನ) ದಳ(ದಂತೆ) ನಖವುಳ್ಳವಳ ನಖಮುಖ(ಉಗುರುಕೊನೆ)ಯಲ್ಲಿ ಉಣ್ಮುವ (ಉಕ್ಕುವ) ಮಯೂಖ (ಕಿರಣಗಳ) ಮಂಜರಿ (ಗೊಂಚಲು) ಎಂಬಂತೆಯೂ, ಆ ಚಲ (ಅಲುಗಾಡುವ) ಅಳಕೆ (ಮುಂಗುರುಳು ಉಳ್ಳವಳ) ಅಳಕವಲ್ಲರಿ (ಮುಂಗುರುಳಿನ ಗೊಂಚಲು) ಅದರಲ್ಲಿ ಬೆಳರ್ತ (ಬೆಳ್ಳಗೆ ಬಿಟ್ಟ) ಬಿರಿ (ಅರಳಿದ) ಮುಗುಳ್ (ಮೊಗ್ಗಿನ)ಹಾಗೆಯೂ ಒಂದೊಂದೇ ಜಲಬಿಂದು ಬಿಡುತಿರ್ಪುದುಂ (ಬೀಳುತ್ತಿರಲಾಗಿ)—

೩. ಆಗ(ಳ್) ವಾರಾಂಗನೆಯರ್ (ಪರಿವಾರದವರು) ಮಣಿಶಲಾಕೆ (ಕೆಂಪು ರತ್ನದ ಸಲಾಕೆ)ಯನ್ನು ನೀರಂಜಿಸು(ಬೆಳಗು)ವಂತೆ ಆ ರಮಣಿ

(ಯಾದ ಸೀತೆ)ಯ ತನುಲತೆಯಿಂ (ಬಳ್ಳಿಯಂತೆ ತೆಳ್ಳಗಿರುವ ಮೈಯಿಂದ) ವಾರಿ (ನೀರಿನ) ಕಣ (ಹನಿಗಳ) ಪ್ರಚಯಃ(ಸಮೂಹ)ವನ್ನು ದುಕೂಲ (ದಿವ್ಯ ವಸ್ತ್ರದ) ಅಂಚಲದಿಂ (ಸೆರಗಿನಿಂದ) ತೊಡೆದರು.

೪. ನಗೆ(ಯಿಂದ ಕೂಡಿದ) ಕಣ್ಣು ವಿಲಾಸವನ್ನು ಸೂಸೆ (ಚೆಲ್ಲಲು), ನಗೆಯ ಮುಖವು ಲಾವಣ್ಯವನ್ನು ಬೀರಲು, ಕಚಬಂಧಮಂ (ತಲೆ ಗೂದಲಿನ ಗಂಟನ್ನು) ಸಾವಗಿಸುತ್ತುಂ (ಸವರಿಸುತ್ತಾ), ಶಿಥಿಲ (ಸಡಿಲ ವಾದ) ನೀವೀಬಂಧಮಂ (ನಡುವಿನ ಸೀರೆಯ ಗಂಟನ್ನು) ಕಾಂಚಿ ಯೊಳ್ (ಒಡ್ಯಾಣದಿಂದ) ತೆಗೆಯುತ್ತುಂ (ಬಿಗಿಮಾಡುತ್ತಾ), ಬಾಹಾ ಲತಾಂದೋಳನಂ (ಉಯ್ಯಾಲೆಯಂತೆ ತೂಗುವ ಬಳ್ಳಿಯಂದದ ಆ ಬಾಹುಗಳು) ಸ್ಮರಮಂತ್ರದೇವತೆಯ ಹಾಗೆ (ನೋಡಿದವರ) ಬಗೆಯಂ (ಮನಸ್ಸನ್ನು) ಬಲ್ (ಗಾಢವಾಗಿ) ಸೆರೆಗೆಯ್ಯಲು— ಬಾಲೆ(ಯಾದ ಸೀತೆ) ಲೀಲೆ(ಯಿಂದ) ಪದನ್ಯಾಸ (ಹೆಜ್ಜೆಯಿಡುವುದನ್ನು) ಮೆರೆದಳು.

ಹಾಗೆ ಬಂದು, ಚೆಂಬೊನ್ನ (ಕೆಂಪು ಚಿನ್ನದ) ಕನ್ನೆಮಾಡ (ಕನ್ಯಾಂ ತಃಪುರ)ದ ಮುಖಶಾಲೆಯಲ್ಲಿ ಇಕ್ಕಿದ ಮುತ್ತಿನ ಬಿತ್ತರಿಕೆ(ವಿಶಾಲವಾದ ಪೀಠ) ಅದರಲ್ಲಿ ಕುಳ್ಳಿರಲಾಗಿ; ಮೇಳದ (ಸೇವೆಯ) ಅಂಗನೆ (ಸ್ತ್ರೀ) ಯರು ಮಂಗಳಪಸದನಂಗೊಳಿಸಲ್ (ಅಲಂಕಾರಮಾಡಲು) ಅವಸರಂ (ಅವಕಾಶವನ್ನು) ಪಡೆದು, ವಿಚಿತ್ರವಾದ ಚೀನಾ (ರೇಷ್ಮೆಯ) ಅಂಬರ (ವಸ್ತ್ರ)ವನ್ನು ನಿರಿಹಿಡಿದು ಉಡಿಸಿ, ಕೆಂಪು ತಾವರೆಯನ್ನು ಎಳೆಯ ಬಿಸಿಲು ಎಳಸಿ (ಬಯಸಿ)ದ ಅಂದಂ (ರೀತಿ) ಆಗುವಂತೆ ಲಾಕ್ಷಾ (ಅರ ಗಿನ) ರಸದಿಂದ ಅಡಿ (ಹೆಜ್ಜೆ)ಯನ್ನು ಊಡಿಯುಂ (ಬಳಿದೂ), ಚರಣ (ಕಾಲಿನ) ನಖ (ಉಗುರು)ಗಳೆಂಬ ಚಂದ್ರಮಾಲೆಗೆ ನಕ್ಷತ್ರಮಾಲೆ ಯನ್ನು ಓಲಗಿಸು (ಸುತ್ತಲೂ ಇಡು)ವಂತೆ ಮುಕ್ತಾಫಲ (ಮುತ್ತು ಗಳಿಂದಾದ) ನೂಪುರ (ಕಾಲುಗೆಜ್ಜೆ) ಅದನ್ನು ತೊಡಿಸಿಯೂ, ಪುಳಿನ ವಳಯ (ಮರಳಿನ ಗುಪ್ಪೆ) ಅದನ್ನು ಹೊಂದಾವರೆಯ ಬಳ್ಳಿ ಬಳಸಿದಂತೆ ನಿತಂಬವಲಯ (ಗುಂಡಾಗಿರುವ ಹಿಂಭಾಗದ ಪ್ರದೇಶ)ದಲ್ಲಿ ಮಣಿ ಮೇಖಲೆಯಂ (ರತ್ನದ ಒಡ್ಯಾಣವನ್ನು) ತೊಡರಿಸಿಯೂ, ಮದನನ ಮದ(ದ) ರದನಿ (ಹೆಣ್ಣಾನೆ)ಯ ರದನದೊಳ್ (ಕೊಂಬಿಗೆ) ಕೀರ್ತಿ

ಮುಖವಮಂ (ಲೋಹದ ಗವುಸನ್ನು) ಕೀಲಿಸುವಂತೆ ಶತಪತ್ರಭಂಗ (ತಾವರೆ ದಳಗಳನ್ನು ಬಿಡಿಸಿದಂತಿರುವ ಆಭರಣವಿಶೇಷ)ವನ್ನು ತುಂಗ (ಉಬ್ಬಿದ) ಸ್ತನ (ಮೊಲೆಗಳ) ಆಭೋಗ (ವಿಸ್ತಾರ)ದಲ್ಲಿ ಸಂಗಳಿಸಿಯುಂ (ಸಿಕ್ಕಿಸಿಯೂ), ಪೀವರ (ಗಾತ್ರವಾದ) ಪಯೋಧರಮಂಡಲಕ್ಕೆ (ಗುಂಡಾದ ಮೊಲೆಗಳಿಗೆ) ಪರಿವೇಷ(ಪ್ರಭಾಮಂಡಲ)ವನ್ನು ಪಡೆಯು ವಂತೆ ಪಂಚರತ್ನದ ಬಣ್ಣಸರವನ್ನು ಕೊರಳಲ್ಲಿ ಇಕ್ಕಿಯೂ, ಬಾಹು (ಗಳೆಂಬ)ಲತೆ(ಬಳ್ಳಿ)ಯ ಚಿಳಲಿನಂತೆ ರತ್ನಗಳ ಕಾಂತಿ ಕವಲುಹರಿಯುವ ಮಟ್ಟಿಗೆ ಅಂಗದ (ತೋಳುಬಂದಿ) ಅದನ್ನು ಅಳವಡಿಸಿ (ಜೋಡಿಸಿ)ಯೂ, ಶಿರೀಷ(ಪುಷ್ಪ)ದ ಬಾಸಿಗವನ್ನು ಭೃಂಗ(ದುಂಬಿ)ಗಳ ಮಾಲೆ ಬಳಸು ವಂತೆ ನಳಿ (ಕೋಮಲವಾದ) ತೋಳುಗಳಲ್ಲಿ ಪಚ್ಚೆಯ ಪಿಂಡು (ಗಟ್ಟಿ) ಕಂಕಣವನ್ನು ಏರಿಸಿಯೂ, ನನೆಗಣೆಗೆ (ಮೊಗ್ಗಿನ ಬಾಣಕ್ಕೆ) ಗರಿಯನ್ನು ಕಟ್ಟುವಂತೆ ಅಂಗುಲಿ (ಬೆರಳು)ಗಳಲ್ಲಿ ರತ್ನದ ಮುದ್ರಿಕೆಯಂ (ಉಂಗುರ ವನ್ನು) ಮುದ್ರಿಸಿಯೂ, ಸ್ಮರವಶೀಕರಣಯಂತ್ರವನ್ನು ಬರೆಯುವಂತೆ ಕಪೋಲತಳದೊಳ್ (ಹಣೆಗೆನ್ನೆಯಲ್ಲಿ) ಮಕರಿಕಾಪತ್ರ(ಎಲೆಯ ಬಳ್ಳಿಯ ಆಕಾರವನ್ನು ) ಬರೆದೂ, ಹೊಸ ಮಸೆ(ಸಾಣೆ)ಯನ್ನುಳ್ಳ ಹೂವಿನ ಕಣೆಗೆ (ಬಾಣಕ್ಕೆ) ಪೊಗರಂ (ಕಾಂತಿಯನ್ನು) ಪಡೆಯುವಂತೆ ನಗೆಯ ಕಣ್ಣು ಗಳಲ್ಲಿ ಅಂಜನಮಂ (ಕಾಡಿಗೆಯನ್ನು) ಅಣ್ಮೆಗೆಯ್ದಂ (ಹಚ್ಚಿಯೂ), ಕರ್ಣಾಂತ (ಕಿವಿಯ ಕೊನೆಯವರೆಗೂ) ವಿಶ್ರಾಂತ (ಹೋಗಿ ನಿಂತ) ವಿಲೋಚನದೊಳ್ (ದೊಡ್ಡ ಕಣ್ಣುಗಳಲ್ಲಿ) ಪಡಿ(ಪ್ರತಿಯಾದದ್ದನ್ನು) ಇಟ್ಟು ನೋಡುವಂತೆ ಕಿವಿಯಲ್ಲಿ ಅವತಂಸ (ಕಿವಿಗೆ ಒಡವೆಯಾಗಿ) ಉತ್ಪಲವಮಂ (ಕನ್ನೈದಿಲೆಯನ್ನು) ತೊಡರಿಸಿಯೂ—

೫. ಉಗುರುಗಳ ಕಾಂತಿಯಿಂದ ಅಳಕ (ಮುಂಗುರುಳುಗಳೆಂಬ) ಬಳ್ಳಿಗೆ ನೀರನ್ನು ತಳಿ(ಚಿಮುಕಿಸು)ವ ಹಾಗೆ ಮೆಲ್ಲಮೆಲ್ಲನೆ ತಲೆಯ (ಕೂದಲನ್ನು) ಪಿಕ್ಕಿ (ಬಿಡಿಸಿ); ಚಂದ್ರನ ಕಿರಣಗಳನ್ನು ರಾಹು ಆಗಲೆ ನುಂಗಿ, ಮತ್ತೆ ಉಗುಳುತ್ತದೆ ಎನ್ನುವಂತೆ ಬಾಲೆಯ ಸೋರ್ (ಉದ್ದ ವಾದ) ಮುಡಿಯನ್ನು (ಹೂಗಳಿಂದ) ಮುಡಿಸಿ; ಪೆರೆಗೆ (ಚಂದ್ರನಿಗೆ) ನುಣುಪಾದ (ಕರಿಯ) ಗೆರೆಯನ್ನು ಪಡೆವಂತೆ (ಹೊಂದಿಸುವ ಹಾಗೆ)

ಲಲಾಟದೊಳ್ (ಹಣೆಯಲ್ಲಿ) ಮೃಗಮದ (ಕಸ್ತೂರಿಯ) ಬಿಂದುವಂ (ಚುಕ್ಕಿಯನ್ನು) ತಿದ್ದಿದರು.

ಆಗ ಆಕೆಯ ಮಂಗಳ ಪಸದನ(ಪ್ರಸಾಧನ, ಅಲಂಕಾರ)ವೇ ತನಗೆ ವೀರ(ದ) ಪಸದನ (ಅಲಂಕಾರ)ವಾಗಲು—

೬ "ಬಾಲೆಯ ಕಡೆಗಣ್ಣಿನ ನೋಟವೆ ಸಾಲದೆ? ನನೆ (ಮೊಗ್ಗಿನ) ಕಣೆ(ಬಾಣ)ಗಳು ಏವುವು (ಏನು ಮಾಡುತ್ತವೆ?)" ಎಂದು ಮನೋಜನು "ಶೂಲಿಯ (ಈಶ್ವರನ) ನೊಸಲ (ಹಣೆಯ) ಉರಿಗಣ್ಣು ಪೀಲಿಯ (ನವಿಲುಗರಿಯ) ಕಣ್ಣು ಎಂಬುವನು ಯಾವನು ನನಗೆ ಇದಿರು!" ಎಂಬನು.

೭. ಮನಸಿಜನ್ (ಮನ್ಮಥ) ಎಂಬುದು, ರತಿ ಎಂಬುದು, ಕಬ್ಬಿನ ಬಿಲ್ಲು ಎಂಬುದು, ಕುಸುಮ (ಹೂವಿನ) ಬಾಣ ಎಂಬುದು, ಕೋಗಿಲೆಯ ನಿಸ್ವನ(ಧ್ವನಿ) ಎಂಬುದು, ಮಧುಕರ (ದುಂಬಿಗಳ) ಝುಂಕೃತ(ಝೆಂಕಾರ) ಎಂಬುದು—(ಇವೆಲ್ಲಾ) ಸೀತೆಯ ಪಸದನ(ಅಲಂಕಾರ)ಕ್ಕೆ ಪರ್ಯಾಯ (ಸಮಾನವಾದ ಬೇರೆ ಬೇರೆ ಹೆಸರುಗಳು.)

೮. ತೊಡವು(ಆಭರಣ)ಗಳು ಈ ಸರೋಜದಳ(ದಂತೆ) ನೇತ್ರವುಳ್ಳವಳ ಮೈಯ ಬೆಳಗಿಂದೆ (ಕಾಂತಿಯಿಂದ) ಉಪಾಶ್ರಯ (ಸಹಾಯ) ಪಡೆದುವು. ನೋಡುವವರು ಉಮ್ಮಳಿಸು(ವ್ಯಥೆಪಡು)ವಂತೆ (ತೊಟ್ಟ ಆ) ರತ್ನದ ವಿಭೂಷಣಗಳು (ತಾವು ತಾವು) ಇದ್ದ ಎಡೆಯ (ಅಂಗಾಂಗಗಳ) ವಿಲಾಸವನ್ನು ಮರೆಮಾಡಿಬಿಡುತ್ತವೆ ಎನ್ನುವಂತೆ, ತೊಡವು (ಆಭರಣ) ಆಕೆಗೆ ಒಪ್ಪವಂ (ಶೋಭೆಯನ್ನು) ಪಡೆವ (ಉಂಟುಮಾಡುವ) ಎಡೆಗೆ (ಸಂದರ್ಭಕ್ಕೆ) ಅಲ್ಲ. [ಹಾಗಾದರೆ, ಆಭರಣಗಳನ್ನು ತೊಡಿಸಿದ್ದು ಆದರೂ ಏಕೆ?] (ಏಕೆಂದರೆ,) ವಧುವಿಗೆ ಭೂಷಣವು ಮಂಗಳಕ್ಕೆ ಕಾರಣವಲ್ಲವೇ!

೨

ಆಗ, 'ಕೂಸನ್ನು ನೆರೆಯೆ (ಸಮೃದ್ಧಿಯಾಗಿ) ಕೈಗೆಯ್ಸಿಂ (ಅಲಂಕಾರ ಮಾಡಿಸಿರಿ' ಎಂದು ಅಂತಃಪುರದ ಪುರಂಧ್ರಿಯರಂ (ಹೆಂಗುಸರನ್ನು) ಕರೆದು ಹೇಳಲಾಗಿ; (ಅವರು) 'ಹಾಗೇ ಮಾಡುತ್ತೇವೆ' ಎಂದು—

೯. "ಈ ಹೊತ್ತಿಗೆ, ಈ ಋತುವಿಗೆ ಈ ಪಸದನ(ಅಲಂಕಾರ); ಇಂತು ಟಿಪ್ಪ (ಹೀಗಾದ) ಮೈಯ ಬಣ್ಣಕ್ಕೆ ಇಂತು (ಹೀಗೆ) ಈ ಹೂವಿನಲ್ಲಿ ಈ ತುಡುಗೆಯಲ್ಲಿ ಈ ಹುಟ್ಟಿಗೆ ಒಳ್ಳೆಯ ಬೆಡಗನ್ನು ಪಡೆದು ಕಂಗೊಳಿಸುತ್ತದೆ."

ಎಂದು ನೆರೆಯೆ (ಸಮೃದ್ಧವಾಗಿ) ಪಸದನಂಗೊಳಿಸಿ (ಅಲಂಕಾರ ಮಾಡಿ)—

೧೦ "ಹಾರವನ್ನು ತೊಡಿಸದೆ(ಯೇ) ಮೊಲೆಯ ಬಿಣ್ಪಿನೊಳಂ (ಗಾತ್ರದಿಂದಲೇ) ನಡು ಬಳುಕುತ್ತಿದೆ! ನಿತಂಬದ (ನಡುವಿನ ಕೆಳಗಿನ ಹಿಂಭಾಗಗಳ) ಬಿಣ್ಪಿನೊಳ್ (ಗಾತ್ರದ ಭಾರದಿಂದ) ತೊಡೆ ಈ (ಇದೋ) ನಡುಗುವುವು ಅಲ್ಲವೇ! ಅಕ್ಕ, ಏವುದು (ಏನು ಪ್ರಯೋಜನ), ಪೋ, ಕಟಿಸೂತ್ರ (ನಡುವಿನ ದಾರ)ವನ್ನು (ಬಿಟ್ಟು)ಬಿಡು. ಪದಾಂಬುರುಹಕ್ಕೆ (ತಾವರೆಯಂಥ ಕಾಲುಗಳಿಗೆ) ತೊಡೆಯ ಬಿಣ್ಪು (ಗಾತ್ರ, ಭಾರ) ತಿಣ್ಣಂ (ಅತಿಯಾಯಿತು!) ನೂಪುರ (ಕಾಲುಗೆಜ್ಜೆ) ಅದನ್ನು ಏನು ತೊಡಿಸುವುದು, ಅಕ್ಕ? (ಇವಳಿಗೆ) ಈ ತೊಡವು ಏವುದೊ (ಏನು ಶೋಭೆ ಕೊಡುತ್ತದೊ?) (ಇವಳ) ರೂಪೇ ಸಾಲದೇ!"

ಎಂದು ಎಂದು ಒಬ್ಬೊಬ್ಬರೂ ಆಕೆಯ ರೂಪವನ್ನು ವಕ್ರೋಕ್ತಿಯೊಳ್ (ನೇರವಾಗಿ ಹೇಳದೆ, ಮುಚ್ಚಿಹೇಳುತ್ತಾ) ಹೊಗಳಿ, ಮಂಗಳ ಪಸದನ(ಅಲಂಕಾರ)ವನ್ನು ಇಕ್ಕಿಯೂ, ಹೊಸಮದವಳಿಗೆ ಆದುದರಿಂದ ತೊಡಿಸಲೇಬೇಕು ಎಂದು ನೆರೆಯೆ (ಸಮೃದ್ಧವಾಗಿ) ಪಸದನಂಗೊಳಿಸೆ (ಅಲಂಕರಿಸಲು)—

೧೧. 'ಮದನ (ಮನ್ಮಥ)ನ ಬಾಳ್ (ಖಡ್ಗ) ಮಸೆದುದು (ಹರಿತವಾಯಿತು). ಕಾಮನ ಅಂಬು (ಬಾಣ) ಕೂರ್ಮಸೆದುದು (ಮತ್ತೂ ಹರಿತವಾಯಿತು.) ಕುಸುಮಾಸ್ತ್ರ (ಹೂವಿನ ಬಾಣವುಳ್ಳ ಮನ್ಮಥ)ನ ಚಕ್ರವಿದು ಬಾಯ್ಗೂಡಿ(ಹೊಸ ಹಲ್ಲುಗಳನ್ನು ಪಡೆಯಿ)ತು'—ಎಂಬ ಎಸಕ (ಉದ್ಯೋಗ)ವನ್ನು ದ್ರೌಪದಿಯ ಪಸದನ(ಅಲಂಕಾರ)ವು ಪಡೆಯಿತು.

೩

೧೨. (ಭರತೇಶನ ತಂಗಿಯರಾದ) ಗಂಗಾದೇವಿ ಸಿಂಧುದೇವಿಯರು ಒದವಿ(ಒಂದಾಗಿ) ರಾಗದೊಳು(ಪ್ರೀತಿಯಿಂದ) ಅಣ್ಣನ ಒತ್ತಿಗೆ(ಹತ್ತಿರ)

ಬಂದು, "ಮದುವೆಗೆ ಸಿಂಗರಿಸಿದ ಹೆಣ್ಣನ್ನು ನಾವು ನೋಡಿದರೆ ಆಗದೇ?" ಎಂದು ಒಡನೆ (ಅವನ ಸಂಗಡ) ಎಂದರು

೧೩ (ಆದಕ್ಕೆ ಭರತನು) "ನಿಮ್ಮ ಅರ್ತಿ (ಆಸೆ) ಸಲ್ಲಲಿ." ಎಂದು (ಅವರನ್ನು) ಒಡನೆ (ಕೂಡಲೆ) ಬೀಳ್ಕೊಟ್ಟನು (ಕಳುಹಿಸಿಕೊಟ್ಟನು.) (ಅವರೂ) ಆಗಲೇ ಹೋಗಿ ಆ (ಹೆಣ್ಣಿನ) ಗೃಹವನ್ನು ಹೊಕ್ಕರು. (ಅಲ್ಲಿ) ಅತ್ತೆ(ಯಾದ ಯಶೋಭದ್ರಾದೇವಿ) ಅಳಿಯನ ತಂಗಿಯರು ಎಯ್ತಂದರು (ಬಂದರು) ಎಂದು ನಲಿದು ಸನ್ಮಾನ ಮಾಡಿದಳು.

೧೪ ಒಡನೆ ಸೇವಕಿಯರಿಂದ ಕಾಲು ತೊಳೆಯಿಸಿ, ನಿವಾಳಿ ಹಿಡಿಸಿ, ಕುಳ್ಳಿರಲು (ಪೀಠವನ್ನು ಇಡಿಸಿ), "ಲೋಲನೇತ್ರೆಯರಿರಾ (ಚಂಚಲ ವಾದ ಕಣ್ಣುಳ್ಳವರೇ), ಕುಳ್ಳಿರಿ." (ಎಂದು) ಆಲೋಲೆ (ಸಂಭ್ರಮದಿಂದ ಕೂಡಿದ) ಯಶೋಭದ್ರಾದೇವಿ ಎಂದಳು

೧೫. "ಇಲ್ಲಿ ಬೇಡ. ನಾವು ನಮ್ಮ ಅತ್ತಿಗೆಯ ಒತ್ತಿನೊಳು (ಸಮೀಪ ದಲ್ಲಿ) ಅಲ್ಲದೆ ಕುಳ್ಳಿರೆವು ಆಕೆ ಎಲ್ಲಿರುವಳು, ಈಕ್ಷಿಸ(ಕಾಣ)ಬೇಕು." ಎಂದು (ಅವರು) ಎನ್ನಲು ; (ಆ ಅತ್ತೆಯು ಅವರನ್ನು) ಅರ್ತಿ(ಪ್ರೀತಿ) ಯಿಂದ ಮಣಿ(ರತ್ನಖಚಿತವಾದ) ಮಾಡದ(ಉಪ್ಪರಿಗೆಯ) ಅಲ್ಲಿಗೆ ಏರಿಸಿ (ಹತ್ತಿಸಿ)ದಳು.

೧೬. ಮೋಹನವನ್ನು ಸೂಸು(ಚೆಲ್ಲು)ವಂತಹ ಶೃಂಗಾರವನ್ನು ತೊಟ್ಟು, ತನ್ನ ವಿಲಾಸಿನಿ(ಸಖಿ)ಯರ ಬಳಸಿನಲ್ಲಿ (ನಡುವೆ), ಪೂಸರಲನ (ಹೂವಿನ ಬಾಣದ ಮನ್ಮಥನ) ಪುಣ್ಯದೇವತೆ(ಯಾದ ರತಿ)ಯಂತೆ ಇದ್ದ ಭಾಸುರ (ಪ್ರಕಾಶಮಾನವಾದ) ಅಂಗಿಯ (ದೇಹವುಳ್ಳ ಆ ಸುಭದ್ರೆ ಯನ್ನು) ಆಗ ಕಂಡರು.

೧೭ "ನಿನ್ನ ಅರಸನ ತಂಗಿಯರು ಬಂದರು. ಏಳಕ್ಕ, ಮನ್ನಿಸು (ಉಪಚರಿಸು)" ಎಂದು ತಾಯಿ ಮಗಳ(ನ್ನು ಕುರಿತು) ಎಂದಳು. ಚನ್ನೆ ಎದ್ದು, ಇದಿರಾಗಿ ಬಂದಳು. (ಮೂವರೂ) ಅನ್ಯೋನ್ಯವಾದ ಪ್ರೇಮವು ನೆಡಲ್ (ಸ್ಥಿರಗೊಳ್ಳುವಂತೆ) ಆಲಿಂಗಿಸಿದರು.

೧೮. ಮೂವರೂ ಒಂದಾಗಿ ಕುಳಿತರು. ಯಶೋಭದ್ರಾದೇವಿ ಕೆಲ (ಪಕ್ಕ)ದಲ್ಲಿ ಕುಳಿತಳು. ಸೇವೆಯ ನರಸುರಸತಿಯರು (ಮನುಷ್ಯರ

ದೇವತೆಗಳ ಸ್ತ್ರೀಯರು) ಅಂದು ಆಗ (ಅವರನ್ನು) ಬಳಸಿ ಆ ವಿಭವದಿಂದ ಇದ್ದರು.

೧೯. (ಗಂಗಾದೇವಿ ಸಿಂಧುದೇವಿಯರು) ಆಕೆಯ (ಸುಭದ್ರೆಯ) ಹಾವಭಾವಗಳ(ನ್ನೂ) ಮಾತಾಡುವಂತೆ ಎಸೆಯುವ ಶೃಂಗಾರವ(ನ್ನೂ) ನೋಡಿದರು. "ನಾಡಾಡಿ (ಸಾಮಾನ್ಯ) ಹೆಣ್ಣಲ್ಲ, ಚಕ್ರವರ್ತಿಯನ್ನು ಮರುಳು ಮಾಡುವಳು!" ಎಂದು ನೆನೆದರು.

೨೦. ಕಾರಿರುಳಿನಲ್ಲಿ ಮಿನುಮಿನುಗಿ ಕಾಣಿಸುತ್ತಿರುವ ತಾರಗೆ(ನಕ್ಷತ್ರ)ಗಳ ಬಂಬಲಂತೆ (ಸಮೂಹದ ಹಾಗೆ) (ಆಕೆಯ) ತೋರ (ದೊಡ್ಡದಾದ) ಮುಡಿಯೊಳ್(ತಲೆಯ ಗಂಟಿನಲ್ಲಿ) ಎಳೆಯ ಮುತ್ತಿನ ಬಲೆಯ ಶೃಂಗಾರ ಒಪ್ಪಿರಲು, ನಿಟ್ಟಿಸಿ(ಕುರಿತು ನೋಡಿ)ದರು

೨೧. "ಕಾಳಿಂದಿ(ಯೆಂಬ ಕರಿಯ ನೀರಿನ ನದಿ)ಯ ಎದುರಲ್ಲಿ ಸುರ (ದೇವ) ಗಂಗೆ ಹರಿಯುವುದನ್ನು ಕೇಳಿರಲಿಲ್ಲವೆ? (ಇಂದು ಅದನ್ನು) ಕಂಡೆವು!" ಎಂದು (ಸುಭದ್ರೆಯ) ನೀಲ(ವಾದ) ಕುಂತಳದ (ತಲೆಗೂದಲಿನ) ಎಳೆಯಮುತ್ತಿನ ಬೈತಲೆಗೆ ಆ ಲಲನೆಯರು ಮೆಚ್ಚಿದರು.

೨೨. ಹೆರಳಿನ ಓಲೆ, ಮಕರಿಕಾಪತ್ರ (ಎಂಬ ಕಿವಿಯ ಒಡವೆ), ಮೂಗುತಿ, ಸಣ್ಣಗೆರೆಯ ತಿಲಕ(ಇವು) ಚವಚವಿಸೆ (ಫಳಫಳಿಸಲು), ಸುರಸತಿ(ದೇವಸ್ತ್ರೀ)ಯರು ನೋಡಿ ಸೋತರು—(ಎಂದ ಮೇಲೆ)ಆ ಮುಖಕ್ಕೆ ನರಸತಿ(ಮನುಷ್ಯ ಸ್ತ್ರೀ)ಯರು ಸೋಲುವುದು ಅರಿದೆ (ಅಸಾಧ್ಯವೆ?)

೨೩. ವಸ್ತುಕ, ವರ್ಣಕ (ಎಂಬ) ಕೃತಿಯ(ಲ್ಲಿ) ಲಿಪಿ(ಬರೆವಣಿಗೆ)ಯ ಸಾಲು ಪುಸ್ತಕದಲ್ಲಿ ಎಸೆ(ಕಂಗೊಳಿಸು)ವಂತೆ ಪುಷ್ಟಿಯ (ಪುಷ್ಟಿಯ, ಘನವಾದ) ಚಿಂತಾಕು (ಒಂದು ತೆರದ ಚಿನ್ನದ ಹಾರ), ಮಣಿಯಸರ, ಬಂದಿ (ಇವು) ಕಂಠದಲ್ಲಿ ಪ್ರಶಸ್ತಪಡೆದುವು.

೨೪. ಹಸ್ತಕಡಗ, ಗೌಳಸರ (?), ಬಳೆ, ಭುಜಕೀರ್ತಿ, ಪ್ರಸ್ತುತದ (ಮದುವೆಯ ಕಾಲದ) ಉಂಗುರ, ತಾತಿ—(ಇವು) ಹಸ್ತಿಯ(ಆನೆಯ) ಸೊಂಡಿಲನ್ನು ನಗುವ (ಸೌಷ್ಠವದಲ್ಲಿ ಮೀರಿಸಿದಂತಹ) ಹಸ್ತಗಳಲ್ಲಿ ಆ ಹಸ್ತಿ (ಗಜ)ಗಮನೆಗೆ ಮೆರೆದುವು.

೨೫. 'ಪದಕ(ವನ್ನೂ) ಹಾರವ(ನ್ನೂ) ಹೇರಿದುದರಿಂದ ಅಡಕವಾಗಿ

ಬೆಳೆದುವಲ್ಲ; ಅದಕ್ಕಿಂತಲೂ ಹೆಚ್ಚಿನವು' ಎನ್ನುವಂತೆ ಎದೆತುಂಬಿ ಬಳೆದ ಬಲ್ಮೊಲೆಗಳು ಆ ಹಾರವ(ನ್ನೂ) ಪದಕವ(ನ್ನೂ) ಆಂತು (ಧರಿಸಿ) ಮೆರೆದುವು.

೨೬. 'ತೂಕದ ಮೊಲೆಗಳನ್ನು ಬಡನಡು ತಾಳದು' ಎಂದು ಆ ಕಾಂತೆ ಚಿನ್ನದ ಕಟ್ಟನ್ನು ಜೋಕೆಗೈ(ಜೋಡಿಸಿ)ದಳೋ ಎಂಬಂತೆ ನವರತ್ನದ ಚಿಂತಾಕು (ಚಿನ್ನದ ಸರ) ನಡುವಿನಲ್ಲಿ ತೋರಿತು.

೨೭. ಎರಡು ಬೆಟ್ಟಗಳನ್ನು ಮುಟ್ಟಿ, ಕಾಮನ ಬಿಲ್ಲು ಶೇಖರವಾಗಿ ಮೂಡಿದುದೊ (ಮೇಲೆದ್ದಿತೋ) ಎಂಬಂತೆ—ಬೆರಕೆ (ಬೇರೆಬೇರೆ ತೆರದ) ಪರಲ (ರತ್ನದ ಹರಳುಗಳ) ನೇವಳ (ಸರಸರವಾದ ಚಿನ್ನದ ಒಡ್ಯಾಣ) ತರುಣಿ(ಯಾದ ಆ ಸುಭದ್ರೆ)ಯ ಕಟಿತಟ(ನಡುಪ್ರದೇಶ)ದ ಅಗ್ರ (ಮೇಲುಭಾಗ)ದಲ್ಲಿ ಹೊಳೆಯಿತು.

೨೮ ಕರೆಗೊಂಡ (ಅಂಚನ್ನು ಪಡೆದ) ಬಿಳಿಯ ಮುಗಿಲಿನಲ್ಲಿ (ಇದು) ಚಿತ್ರವೆಂಬಂತೆ ದೃಷ್ಟಿಯನ್ನು ಕುರಿ(ಕೋರೈಸು)ವ ಮಿಂಚಿನ ಗೊಂಚಲಿನಂತೆ—ನಿರಿ ಹಿಡಿದು ಉಟ್ಟ ದೂವಟ (ದ್ವಿಪಟ್ಟ, ಎರಡು ಮಡಿಕೆಯ ವಸ್ತ್ರ)ದ ಸೀರೆಯ ಮೇಲೆ ಹೊನ್ನಿನ ಗೊಂಡೆಯವು ಮೆರೆಯಿತು.

೨೯. (ಇವು) ರಾಗ (ಪ್ರೀತಿಯ)ರಸದ ಅಬ್ಧಿಯ (ಸಮುದ್ರದ) ತೆರೆ (ಅಲೆ)ಗಳೋ, (ಅಥವಾ) ಮದುವೆಗೆ ಸೀಗುರಿ(ಚಾಮರ)ಗಳನ್ನು ಮಾಡಬೇಕಾದರೆ ಈಕೆ ತೂಗಿ (ಹೀಗೆಂದು ನಿರ್ಣಯಿಸಿ) ಮೇಲುಪಂಕ್ತಿ ತೋರುವಳೋ—ಎಂಬಂತೆ ನಿರಿಗಳನ್ನು ಸಾಗಿಸಿದ (ಸವರಿಸಿದ) ಉಡಿಗೆ ಮೋಹವನ್ನು ಉಂಟುಮಾಡಿತು.

೩೦. ಚಂಡ (ತೀಕ್ಷ್ಣವಾದ ಪರಿಣಾಮವುಂಟುಮಾಡುವ) ಮಾರ (ಮನ್ಮಥ)ನ ವೀರದ ವಿತರಣ (ಅಚ್ಚುಕಟ್ಟಾದ) ಗುಣಗಳ ಕೀರ್ತಿಯನ್ನು ಕೊಂಡ ಕಲಾಪಟ್ಟ (ಬಿರುದಿನ ಗುರುತು) ಎಂಬಂತೆ—ಚಂದ್ರಮಂಡಲದಂತೆ ಮುಖವುಳ್ಳವಳ ಅಡಿಗಳಲ್ಲಿ ಪೆಂಡೆಯ (ಕಾಲುಕಡಗ), ಪಾದವಟ್ಟ(ಪಾದಾಭರಣ)ಗಳು ಒಪ್ಪಿದುವು.

೩೧. ಬೆಳ್ (ಪ್ರಕಾಶಮಯವಾದ) ಉಗುರುಗಳಿಗೆ ಅಲತಗೆಯ (ಅಲಕ್ತಕದ, ಅರಗಿನ ರಸವನ್ನು) ಊಡಿ (ಬಳಿದು), ಪಿಲ್ಲಿಯುಂಗುರವು

ಮಿಂಚಿಕ್ಕಿ(ಕಾಂತಿಯನ್ನು ಚೆಲ್ಲಿ) ಕಣ್ಣಿಗೆ ಎಸೆಯಲು—ಸಲ್ಲಲಿತಾಂಗಿಯ ಕೆಂಪಾದ ಹಜ್ಜೆ ಅನುರಾಗರಸವನ್ನು ಚೆಲ್ಲುವಂತೆ ಮೆರೆದುವು.

೩೨ ಅಪರಂಜಿಯಂದದ ಮೈಗೆ (ಮೈಯ ಮೇಲೆ) ಅಂಜನ (ಕಾಡಿಗೆ) ಬಣ್ಣದ ಸಣ್ಣರವಕೆ ಮೆರೆಯಲು, ಮಂಜು (ಕಣ್ಣಿಗೆ ಹಿತವಾದ) ವಸ್ತ್ರದ ಮೇಲುಸೆರಗು ಬೆಡಗಾಗಿ ಇಳಿದು, (ಆ) ಜಾಣೆ ದೃಷ್ಟಿಗೆ ಅದೇನು (ಚೆಲುವಾಗಿ) ಒಪ್ಪಿದಳೋ!

೩೩. ಕಂಗೊಳಿಸುವ ಒಳವಸ್ತ್ರದ ಒಂದು ಕೆಂಪಿಂದ ತನ್ನ ಶುಭ್ರಾಂಗ ವಸ್ತ್ರಕ್ಕೆ ಕೆಂಪು ರಮಿಸೆ (ಕೂಡಿಕೊಳ್ಳಲು), ಆ ನೀರೆ (ತಾನು) ರಂಗು ಮಾದಳದ ಸೀರೆಯನ್ನು ಉಟ್ಟಳು ಎಂಬ ಬೆಡಗಿನಿಂದ ಎಸೆದಳು

೩೪. ಜೂಳೆಯ (ಬೈತಲೆಯಿಂದ ಇಳಿಬಿಟ್ಟ) ಚಿನ್ನ (ಸಣ್ಣ) ಹೂ, ಕಮಲದ ಹೂವಿನ ಚಳಿಕಿಗೆ (ಹೂವಿನ ಕೈಬಳೆ), ತಾಳಿಹೂ(ವಿನ) ಬೆಂಬಚ್ಚಿದಂಡೆ (ಬೆನ್ನಿನ ಪಚ್ಚೆದಂಡೆ), ತೋಳುವಂಕಿ, ಕರ್ಣಿಕೆ (ಕಿವಿಗೆ) ಸರಪಣಿ ಮೊದಲಾಗಿ ಆಭರಣ(ಗಳು) ಆ ಬಾಲೆಗೆ ಒಪ್ಪಿದುವು.

೩೫. ಗಂಡನ ಬಾಸಿಂಗದೊಡನೆ ರಾತ್ರಿಗೆ ತನ್ನ ತೊಂಡಿಲು(ತಲೆಯಲ್ಲಿ ಧರಿಸುವ ಮುತ್ತಿನ ಕುಚ್ಚು) ಮೆರೆಯುವುದು; ಇನ್ನು ಅದನ್ನು ಮುಂಡಿಪುದು (ಅಲಂಕಾರವಾಗಿ ಧರಿಸುವುದು) ಒಂದು ಅಲ್ಲದೆ (ಹೊರತು), ಉಳಿದ (ಮಿಕ್ಕ) ಆಭರಣವೆಲ್ಲವು ಆ ಅಂಗನೆ(ಹೆಣ್ಣಿ)ಗೆ ಮುಂಡಳಿಸಿ (ಹೊರೆಹೊರೆಯಾಗಿ) ಇದ್ದುವು.

೩೬. ವೈವಾಹ(ವಿವಾಹ ಕಾಲ)ದ ಉಚಿತವಲ್ಲದೆ (ಅವಳಿಗೆ)ತೊಡವು (ಆಭರಣಗಳು) ಏಕೆ? ಆವಳು ಸ್ವಭಾವ (ಸಹಜವಾಗಿ, ಹುಟ್ಟನಿಂದ) ಶೃಂಗಾರವಾದ ಅಂಗ(ದೇಹ)ವುಳ್ಳವಳು (ಆದ್ದರಿಂದ,) ಹೂವಿನಿಂದ ನಾರು ಒಪ್ಪುವ ಹಾಗೆ ಆಕೆಯನ್ನು ಸೋಂಕಿ (ಆ) ತೊಡಿಗೆಗಳು ಪಾವನ (ಪವಿತ್ರ)ವಾದುವು.

೩೭. ಆಭರಣಗಳು ಆಕೆಯ ಅಂಗ(ದೇಹ)ವನ್ನು ಸೋಂಕಿ ಕಲಾ (ಕಾಂತಿಯಿಂದ)ಭರಿತಗಳು (ತುಂಬಿದಂಥವು) ಆದುವು ಇನ್ನು ಆ ಭಾವೆ (ಬೆಳೆದ ಸೌಂದರ್ಯವುಳ್ಳವಳು) ಭರತರಾಜೇಂದ್ರನನ್ನು ಸೋಂಕಿ,(ತಾನು) ಮಹಾಭೂಷಣವನ್ನು ಪಡೆದವಳಾಗಿರುವಳು.

೩೮. ಸಖಿಯರು ಕೊಡುವ (ವೀಳೆಯದ)ಎಲೆಯ ಘಳಿಗೆಯ (ಮಡಿಸಿದ ತುತ್ತನ್ನು) ಕೊಳ್ಳುತ್ತ, ಸಮ್ಮುಖದಲ್ಲಿ (ಎದುರು) ಇದ್ದ ಅಮರಕಾಂತೆ (ದೇವಸ್ತ್ರೀ)ಯರ ಮುಖವನ್ನು ನೋಡುತ್ತ ಸುಮ್ಮನಿದ್ದಳು. (ಎಷ್ಟೇ ಆದರೂ—) ಗಂಭೀರ(ವಾಗಿ) ಸುಖಿಯ(ಸುಖವನ್ನು ಅನುಭವಿಸುವ ಭರತರಾಜೇಂದ್ರನ) ಪಟ್ಟದ ರಾಣಿಯಲ್ಲವೆ!

೩೯. "ನಮ್ಮ ಅಣ್ಣನನ್ನು ಸೋಲಿಸು(ವಶಪಡಿಸುಕೊಳ್ಳು)ವವಳು ನೀನೇ (ಅಲ್ಲವೆ!)" ಎಂದು ಅವರು ಆನಂದದಿಂದ ಕೇಳಿದರು. "ನನಗೆ ಅದು ಏನು ದೊಡ್ಡದೆ?" ಎಂದು ನಗುವಂತೆ ಆಕೆ ಮೋನ (ಮೌನ) ದಿಂದ (ಮಾತನಾಡದೆ) ನಗುತ್ತಿದ್ದಳು

೪೦. "ಚಕ್ರಧರ(ನಾದ ಭರತ)ನನ್ನು ಸೋಲಿಸುವುದು (ಯಾವುದು?) ಹೇಳು. ಈ ತಿಲಕವೆ? ಈ ತುರುಬೆ (ತಲೆಕೂದಲಿನ ಮುಡಿಯೆ?) ಮತ್ತೆ, ಈ ಹೂವೆ? ಮಾತಾಡು, ಹೆಣ್ಣೆ" ಎನ್ನುವರು. ಆಕೆ ಲಜ್ಜೆಯಿಂದ ಸೋತಂತೆ ತಲೆ ಕುಸಿದು (ತಗ್ಗಿಸಿ) ಇರುವಳು.

೪೧ ಕೈಯಿಂದ (ಅವಳ) ಮುಖವನ್ನು ಹಿಡಿದು ಎತ್ತಿ, ನಗುತ್ತ ನೋಡುವರು. 'ಅಯ್ಯಯ್ಯೋ, ನಿನ್ನ ಜಾಣತನವೆ! ಮೈಯುಳ್ಳ (ಸಾಕ್ಷಾತ್ತಾದ) ಮದನ(ನಾದ ಭರತನು) ನಿನಗೆ ಮೆಚ್ಚುವನೆ? ನಮ್ಮೊಡನೆ ಒಯ್ಯನೆ (ಮೆಲ್ಲನೆ) ನುಡಿ.' ಎಂದು ಒಸೆದು (ಪ್ರೀತಿಯಿಂದ) ಎಂಬರು.

೪೨. ಕಡೆಗೆ, ಅಡ್ಡಮುಖವಿಕ್ಕಿ ಸುಮ್ಮನಿರುವಳು. (ಅದನ್ನು)ನೋಡಿ, "(ಈ) ನುಡಿಗೆಟ್ಟ (ಮೂಗಿಯಾದ) ಹೆಣ್ಣಿಗೆ ನಮ್ಮ ಅಣ್ಣ ಕಡುಸೋತುದಾಯಿತಲ್ಲ!" ಎಂದು ಒತ್ತಿ ಚುನ್ನವ (ಚೇಷ್ಟೆಮಾತನ್ನು) ನುಡಿದರು. ಅದಕ್ಕೂ (ಅವಳು) ನಗುತ್ತಿದ್ದಳು.

೪೩. "ಸರಸಗುಣಗಳಿಲ್ಲದ ಇವಳ ರೂಪವೇನು? ಕಾಸರಕನ (ಮೇಲೆ ಮಾತ್ರ ಮಿರುಗು; ತಿಂದರೆ, ತುಂಬ ವಾಂತಿ) ಹಣ್ಣಿನ ಹಾಗೆ!" ಎಂದು (ಅವಳು) ಮಾತಾಡಬೇಕೆಂದು ಕೆರಳಿಸಿ ನುಡಿಯುವರು. ಆಕೆ, ತಲೆ ಬಗ್ಗಿಸಿ ನಗುತ್ತಿರುವಳು.

೪೪. "ಆಕೆ ಇಂದು ನುಡಿಯಳು. ನಾಳೆ ನಾಡಿದ್ದು ನೀವು ಬಂದು,

ಒಮ್ಮೆ ಮಾತಾಡಿ ನೋಡಿ. ಒಂದೊಂದೆ ನುಡಿಯಲ್ಲಿ (ನಿಮ್ಮನ್ನು) ಕಟ್ಟಿ ಬಿಡುವಳು. ಇಂದಿಗೆ (ಇಷ್ಟು) ಸಾಕು." ಎಂದಳು, ಮಧುವಾಣಿ

೪೫. "ನಿಮ್ಮ ಪಾಡೇನು ? ನಿಮ್ಮ ಅಣ್ಣನ ನುಡಿಗಳನ್ನೂ ಒಮ್ಮೊಮ್ಮೆ ಕಟ್ಟಿ ಸಿಲ್ಲಿಸುವಳು! ನಮ್ಮ ದೇವಿಯ ಮುಂದೆ, ಪರರಿಗೆ ಜಾಣ್ಮೆಯೇ! (ಸ್ವಲ್ಪ)ಕಾಲ ನಮ್ಮನ್ನು ಸೈರಿಸಿ." ಎಂದಳು, ಅವಳು (ಆ ಮಧುವಾಣಿ)

೪೬. (ಆಗ ಗಂಗಾದೇವಿ ಸಿಂಧುದೇವಿಯರು) "ಅಲ್ಲವೆ, ಹೇಳು. ಈಕೆಗೆ ಉರೆ (ತುಂಬಾ) ತನ್ನ ಪತಿಯೊಡನೆ ಅಲ್ಲದೆ ನುಡಿಯುದ ಛಲ ವೇನೊ? ಒಳ್ಳೆಯದಾಯಿತು. ಅದನ್ನು ನಮ್ಮ ಅಣ್ಣನಿಗೆ ಹೇಳುತ್ತೇವೆ." ಎಂದರು. (ಅದನ್ನು ಕೇಳಿ,) ಆ ನಲ್ಲ (ಒಳ್ಳೆಯ) ಹೆಣ್ಣು ನಾಚಿ(ಕೆಯಿಂದ) ಬೆದರಿದಳು.

೪೭. "(ಅವಳನ್ನು) ಏಕೆ ಕಾಡುವಿರಿ? ನಿಮ್ಮಣ್ಣನಲ್ಲಿಯೂ ನಿಮ್ಮ ಲ್ಲಿಯೂ ಈ ಕನ್ಯೆ ನುಡಿದು ಗೆಲ್ಲುವವಳೆ? ಸಾಕು, ಸೈರಿಸಿರಿ." ಎಂದು (ಸುಭದ್ರೆಯ) ತಾಯಿ ಅವರಿಗೆ ವಿನಯದಿಂದ ಇಚ್ಛಾಕಾರಗೈದಳು (ವಹಿಸಿಕೊಂಡು ಮಾತನಾಡಿದಳು.)

೪೮. "ನಿಮ್ಮ ಅಣ್ಣನು ಅಗ್ಗಳ(ಶ್ರೇಷ್ಠ)ನು. ನೀವು ದೇವಸ್ತ್ರೀಯರು. ನಮ್ಮಲ್ಲಿ ಏನುಂಟು, ಅಕ್ಕಂದಿರಿರಾ? ನಿಮ್ಮವರು ಎಂದು ನಮ್ಮನ್ನು ಕೂಡಿಕೊಂಡಿರಿ, ಅಷ್ಟೆ!" ಎಂದು, ಹಮ್ಮು ಅಳಿದು (ಅಹಂಕಾರ ವಿಲ್ಲದೆ, ವಿನಯದಿಂದ) ಆ ಜನನಿ (ತಾಯಿ) ಒರೆ(ಹೇಳಿ)ದಳು

೪೯. (ಅದಕ್ಕೆ) ಅವರು "ಸುರಸತಿಯರಿಗಿಂತ ಅಧಿಕಳಾದ ಹೆಣ್ಣನ್ನು ಹೆತ್ತಿರುವೆ. ಭೂವರಕುಲಕ್ಕೆ ಉತ್ತಂಸ(ತಲೆಯೊಡವೆಯಂಥವ)ನಾದವ ನಿಗೆ ಇವಳನ್ನು ಪರಿಣಯನ (ಮದುವೆ)ಮಾಡುವ ಸಿರಿ (ಭಾಗ್ಯವನ್ನು) ಪೆತ್ತೆ (ಪಡೆದಿರುವೆ.) ನೀನೇ ಭಾಸುರ(ಬೆಳಗುವ) ಪುಣ್ಯವುಳ್ಳವಳು." ಎಂದರು, ಅವರು.

೫೦. "ಇವಳ ವಿವಾಹ ಕಾರಣವಾಗಿ ನಾವು ಇಂದು ತವರುಮನೆ ಯನ್ನು ಕಂಡೆವಾಗಿ, ಇವಳಲ್ಲದೆ ನಮಗೆ ಯಾರು ಹಿತವೆಯರು?" ಎಂದು ಅವರು ಮತ್ತೆ ಸಂತೋಷದಿಂದ ಆಡಿದರು.

೫೧. ಇಂತು ವಿನಯ(ದಿಂದ ಕೂಡಿದ) ವಾಕ್ಯವನ್ನು ನುಡಿದು, ಮತ್ತೆ

(ತಮ್ಮ) ಅಣ್ಣನ ವನಿತೆಗೆ ಆಭರಣ ವಸ್ತ್ರಗಳನ್ನು ಅನುರಾಗದಿಂದ ಇತ್ತು, "ಪೋಪೆವು (ಹೋಗುತ್ತೇವೆ)" ಎಂದು, ಅಂದು (ಆ ವೇಳೆಯಲ್ಲಿ) ಒಡನೆ ಒಂದು ಬಿನದ(ವಿನೋದ)ವನ್ನು ತೊಡಗಿದರು.

೫೨. "ಅತ್ತಿಗೆ, ನೋಡೋಣ: ಉಂಗುರಗಳನ್ನು ತೋರಿಸು." ಎನುತ್ತ ಒತ್ತಿ (ಹತ್ತಿರ ಬಂದು) ಬೆರಳಿಂದ (ಅವನ್ನು) ತೆಗೆದು, "ಗುರು ತನ್ನು ಕೊಟ್ಟಳು, ಎಂದು ಇವುಗಳನ್ನು ನಿನ್ನ ಪುರುಷನಿಗೆ ಕೊಡುತ್ತೇವೆ" ಎನ್ನುತ್ತಾ, ಒಡನೆ ಎದ್ದರು.

೫೩. ಏಳೇಳಲು, (ಸುಭದ್ರಾದೇವಿ) ಕುಳಿತು, ಏಳದೆಯೆ, ಕೈಗಳನ್ನು ನೀಡಿ ಅವರಿಬ್ಬರ ಕೈ ಹಿಡಿದಳು; ಚಾಳಿಸಿ (ತಪ್ಪಿಸಿಕೊಂಡು) ಹೋಗುವೆ ವೆಂದು (ಅವರ್ಳು) ಅತ್ತಿತ್ತ ಒಲೆದರು. ಬಾಲೆ ಬಲವಾಗಿ ಹಿಡಿದು, ತೆಗೆ (ತನ್ನ ಕಡೆಗೆ ಎಳೆ)ದಳು.

೫೪ ತಮ್ಮ ಶಕ್ತಿಯನ್ನು ಮಿಕ್ಕ (ಮೀರಿಸಿದ) ಶಕ್ತಿಯನ್ನು ಕಾಣುತ್ತ (ಆ) ಹೆಣ್ಣುಮಕ್ಕಳು ಆ ಕ್ಷಣವೆ "ನಮ್ಮ ಚಕ್ರವರ್ತಿಯ ಸೊಕ್ಕನ್ನು ನಿಲ್ಲಿಸುತ್ತಾಳೆ!" ಎಂದರು. (ಸುತ್ತಿನ) ಹೆಣ್ಣುಮಕ್ಕಳೆಲ್ಲ ನಕ್ಕು, ಆರ್ತಿ (ಪ್ರೀತಿ)ಯನ್ನು ಪಡೆದರು.

೫೫ "'ಸಂಧಾನಕ್ಕೆಂದು ಎಯ್ದಿ (ಬಂದು), ಸೂರೆಮಾಡಿದರು' ಎಂಬ ಅಂದವನ್ನು ತೋರುವಿರಾ!" ಎಂದು ನಗುತ್ತ, ತಾನು ಅವರಲ್ಲಿ ದಸಿದೋರುತ್ತಾ, ಉಂಗುರಗಳನ್ನು (ಅವರ ಕೈಯಿಂದ) ಸಿಂಧೂರದಂತೆ (ಸಿಂಧುರ ಎಂದರೆ ಆನೆ ಸುಲಭವಾಗಿ ಸೆಳೆದುಕೊಳ್ಳುವಂತೆ) ಆಯ್ದು ಕೊಂಡಳು.

೫೬ (ಹೀಗೆ) ನುಡಿ ಹೊಮ್ಮಲು, ಆಕೆಯ ಧ್ವನಿ ಸ್ವರ್ಗವೀಣೆಯನ್ನು ನುಡಿಸಿದಂತೆ ಕಿವಿಗೆ ಇಂಪಾಯಿತು (ಅವಳ) ನುಡಿಯನ್ನು ಕೇಳಬೇಕು ಎಂದು (ತಾವು) ತೊಡಗಿದ ಕಾರ್ಯ ಸಂಗಡಿಸಿತು (ನೆರವೇರಿತು) ಎಂದು ಅವರು ನಲಿದರು.

೫೭ "ಎಂತೆಂತುಟು? (ಹೇಗೆ? ಹೇಗೆ?) ಇನ್ನೊಮ್ಮೆ ಹೇಳು." ಎಂದರೆ; ಆಕೆ ಮುನ್ನ (ಮೊದಲು ತಾನು) ಎಂತು (ಹೇಗೆ) ಇದ್ದಳೋ ಹಾಗೆ ಮೌನವಾಗಿ ತಾನು ತೆಪ್ಪಗೆ ಇದ್ದಳು. ಆ ಗಂಭೀರಕ್ಕೆ (ಮೆಚ್ಚಿ

ಕೊಂಡು) ಆ ದೇವಕಾಂತೆಯರು (ಅವಳನ್ನು) ಅರ್ತಿ (ಪ್ರೀತಿ) ಮಾಡಿದರು.

೫೮. "ಪ್ರವರ (ಹೆಚ್ಚಿನದಾದ ನಿನ್ನ) ಶಕ್ತಿಯನ್ನು ನಿನ್ನ ತವರುಮನೆಯಲ್ಲಿ ತೋರುವೆಯಂತೆ. ಸೈರಿಸು. ಇನ್ನು, ನಮ್ಮ ತವರುಮನೆಗೆ ನೀನು ಬಂದಾಗ, ಹೇಳುತ್ತೇವೆ." ಎಂದು ಅವರು, ಉರೆ (ಬಹಳವಾಗಿ) ಪಚಾರಿಸುತ (ಹಾಸ್ಯಮಾಡುತ್ತಾ) ಎದ್ದರು.

೫೯. (ಆಗ) ಯಶೋಭದ್ರಾದೇವಿ ಬಳಿಸಂದು (ಹತ್ತಿರ ಬಂದು), ನಗುತ್ತ ಅವರಿಗೆ ಮಂಗಳವಸ್ತುಗಳನ್ನು ಇತ್ತಳು. ಅವರು ಆಕೆಗೆ ನಲಿದು ಉಚಿತವನ್ನು ಕೊಟ್ಟರು. (ಹೀಗೆ) ಅತ್ತ ಇತ್ತ ಉತ್ಸಾಹ ಬಳೆಯಲು, ಬೀಳ್ಕೊಂಡರು (ಕಳುಹಿಸಿಕೊಂಡು ಹೋದರು.)

## ವಿವಾಹ ಮಂಗಲ

೧. ಜಾಗದ (ಪಚ್ಚೆಯ ಕಲ್ಲಿನ) ಪಡಲಿಗೆ(ಪಟಲಕ, ಮೇಲುಭಾವಣಿ)ಯೂ ತುಂಗ (ಎತ್ತರವಾದ) ಭೃಂಗಾರ(ಕಲಶ)ವೂ ಹರಿನೀಲ (ಇಂದ್ರನೀಲ)ದ ಕಂಭವನ್ನು ನೆಮ್ಮಿರಲು, ಸುರುಚಿರವಾದ ಚಿತ್ರವು ಭಾಸ್ವತ್ (ಪ್ರಕಾಶಮಾನವಾದ) ಭಿತ್ತಿ(ಗೋಡೆ)ಯನ್ನು ಸುತ್ತಿರಲು, ಹರಿತ್(ಹಸುರು)ರತ್ನದ ಮಧ್ಯ ಆಜಿರ(ರಂಗ)ವನ್ನು ಮುಕ್ತಾವಲಿಯ (ಮುತ್ತುಗಳ) ರಂಗವಲ್ಲಿ ಬಳಸಲು, ಕರ್ಕೇತನ (ವೆಂಬ ರತ್ನದಿಂದಾದ) ದ್ವಾರದ ಶಾಖಾಂತರಮಂ (ಎರಡೂ ಕಡೆಗಳನ್ನು) ರತ್ನದ ಸ್ಫುರತ್ (ಹೊಳೆಯುವ) ತೋರಣವು ಎಳಸೆ(ಬೆಳಗಲು), ಉದ್ವಾಹ (ಮದುವೆಯ) ಗೇಹಂ(ಮನೆಯು) ಬೆಡಗಾಯಿತು.

ಆದರ ಮಧ್ಯಪ್ರದೇಶದಲ್ಲಿ—

೨. ಮರಕತ (ಪಚ್ಚೆಯ ಕಲ್ಲಿನಿಂದಾದ) ಮಂಗಲವೇದಿಕೆ (ಜಗುಲಿ) ಧರಾ(ಭೂಮಿ)ಯೆಂಬ ಅಂಗನೆ(ಸ್ತ್ರೀ)ಯ ಕೇಶಬಂಧದ ಹಾಗಿರಲು, ಮುಕ್ತಾ (ಮುತ್ತುಗಳಿಂದ) ವಿರಚಿತ(ವಾದ) ರಂಗವಲ್ಲಿಯು ತೊಳಗಿ ಹೊಳೆಯುವ ತಲೆಯ ತೊಡಿಗೆಯ ಹಾಗೆ ಮನೋಹರವಾಯಿತು.

೩. ಪಸುರು (ಹಸುರು) ಪರಲ (ಕಲ್ಲಿನ) ಜಗುಲಿಯಲ್ಲಿ ಚೆಂಬೊನ್ನ

(ಕೆಂಪು ಚಿನ್ನದ) ಪಟ್ಟದ ಮಣಿ ರಂಜಿಸುತ್ತಿತ್ತು. (ಹೇಗೆ ಎಂದರೆ), ಹಸು ರೆಲೆಯಿಂದ ಮುಸುಕಿದ ತಾವರೆಯ ಕೊಳದಲ್ಲಿ ಹಸಿರು ಹೋಗಿ, ಮರಲ್ದು ಅರಲ್ದ (ಚೆನ್ನಾಗಿ ಅರಳಿದ) ಪೊನ್ (ಹೊಂಬಣ್ಣದ) ತಾವರೆಯ ಹಾಗೆ.

೪. ಎಳೆ ಅಡಕೆಯ ಗೊನೆಯಿಂದ, ಮಾತುಳಂಗ(ಮಾದಳದ ಫಲ) ದಿಂದ, ನಾರಿಕೇಳ (ತೆಂಗಿನ) ಫಲದಿಂದ, ದ್ರಾಕ್ಷಾಫಲದಿಂದ, ಕಾಂಚನ (ಹೊಂಬಣ್ಣದ) ಕದಳೀ (ಬಾಳೆಯ) ಫಲದಿಂದ—ವೇದಿಕೆ(ಜಗುಲಿ)ಯ ಅಂತರ್ಭಾಗಂ (ಒಳಪ್ರದೇಶವು) ಒಪ್ಪಿತ್ತು.

೫. ಬಿಸ(ತಾವರೆದಂಟಿನ) ಸೂತ್ರ(ನೂಲನ್ನು) ತ್ರಿತಯಂ (ಮೂರು ಸಲ ಸುತ್ತಿದ್ದು), ಯವ (ಜವೆಯ) ಅಂಕುರ (ಮೊಳಕೆಗಳಿಂದ) ಕೃತ (ಮಾಡಿದ) ಗ್ರೈವೇಯಕಂ (ಹಾರ,) ಪಲ್ಲವ (ಚಿಗುರಿನಿಂದ) ಉಲ್ಲ ಸಿತ (ಬೆಳಗುವ) ಸುದರ್ಶನೀಯವಾದ (ಚೆನ್ನಾಗಿ ಕಾಣುವುದಕ್ಕೆ ತಕ್ಕ) ಆದರ್ಶ (ಕನ್ನಡಿ), ಅಮಲವೂ ಸುಂದರವೂ ಆದ ಸ್ರಕ್ (ಹೂವು), ಪಂಚರತ್ನ(ಗಳನ್ನೂ) ಸಮಸ್ತ ಓಷಧಿ(ಗಳನ್ನೂ) ಗರ್ಭದಲ್ಲಿ ಉಳ್ಳದ್ದು, ಅಕ್ಷತೆಯಿಂದ ಯುತಂ (ಕೂಡಿದ್ದು), ದೂರ್ವ (ಎಳೆಯ ಗರುಕೆಯಿಂದ) ಅಂಚಿತಂ (ಕೂಡಿದ್ದು), ಸರ್ವಧಾನ್ಯ(ಗಳ ಮೇಲೆ) ಸಮುತ್ತಂಭಿತ (ಚೆನ್ನಾಗಿ ನೆಲೆಗೊಳಿಸಲ್ಪಟ್ಟದ್ದು ಆಗ) ಪೂರ್ಣಕುಂಭವು ಆ ವೇದಿಕಾ (ಜಗುಲಿಯ) ಮಧ್ಯದಲ್ಲಿ ಎಸೆದತ್ತು (ಕಂಗೊಳಿಸಿತು.)

೬. ಅನುರೂಪ(ವಾದ) ಸ್ಫಟಿಕದ ಅಬ್ಜ(ತಾವರೆಯಾಕಾರದ ಪಾತ್ರ) ದಲ್ಲಿ ದಧಿ (ಮೊಸರು), ಸುವರ್ಣ (ಚಿನ್ನದ) ಕ್ರೌಂಚ (ಪಕ್ಷಿಯ ಆಕಾ ರದ ಪಾತ್ರ)ದಲ್ಲಿ ಗೋರೋಚನ, ಘನವಾದ ಹಾರೀತಕ (ಹಸಿರು ಕಲ್ಲಿನ) ಹಂಸಿ (ಹೆಣ್ಣು ಹಂಸದ ಆಕಾರದ ಪಾತ್ರೆ)ಯಲ್ಲಿ ಹರಿತ (ಹಸು ರಾದ) ದೂರ್ವ (ಎಳೆಯ ಗರುಕೆ), ರಾಜತ (ಬೆಳ್ಳಿಯಿಂದಾದ) ದ್ರೋಣಿ(ದೊನ್ನೆ)ಯಲ್ಲಿ ಘನಸಾರ (ಕರ್ಪೂರ), ಹರಿನೀಲ (ಇಂದ್ರ ನೀಲದ) ಶುಕ್ತಿಕೆ (ಮುತ್ತಿನ ಚಿಪ್ಪು)ಗಳಲ್ಲಿ ಕಸ್ತೂರಿ, ಮಾಣಿಕ್ಯ (ಕೆಂಪು ಕಲ್ಲಿನ) ಭಾಜನ(ಪಾತ್ರೆ)ಗಳಲ್ಲಿ ಕುಂಕುಮದ ಪಂಕ(ಕೆಸರು), (ಇವು) ಮಾಂಗಲ್ಯಸಾಕಲ್ಯಮಂ (ಸಕಲವಾದ ಮಂಗಲ ದ್ರವ್ಯಗಳನ್ನು) ಏನು ಮೆರೆದುವೋ!

೭. ಶಂಕುಶಲಾಕೆಯೂ ಗಳಿಗೆಬಟ್ಟಲೂ ಒಪ್ಪಿರಲಾಗಿ; ವೇದನಾದದೊಡನೆ ಸಂಕರವಾಗಿ (ಬೆರೆತು) ಪಾಠಕರ ಪಟು (ಸಮರ್ಥವಾದ) ಸ್ವನ (ಧ್ವನಿಗಳೂ) ಮಂಗಳ ಗೀತ ತೂರ್ಯ (ವಾದ್ಯಗಳ) ಘೋಷವೂ ಕಡಲ ಊರ್ಮಿ(ಅಲೆ)ಯಂತೆ ಉಲಿಯೆ (ಧ್ವನಿಮಾಡಲು); ನಾರಿಯರು ನರ್ತಿಸಲು; “ ಲಗ್ನಂ ಸಾರ್ಕೆ (ಹತ್ತಿರ) ಆಯಿತು. ವಧೂವರರನ್ನು ಕರೆಯಿರಿ.” ಎಂದು ಪುರೋಹಿತರು ಹಿತದಿಂದ ಉಸಿರಿದರು.

೮. (ತನ್ನ) ಕುಡು (ಬಾಗಿದ) ಪುರ್ಬಿಂ (ಹುಬ್ಬಿನಿಂದ) ಕಬ್ಬಿನ ಬಿಲ್ಲನ್ನೂ, ಪರಪುವ (ಕೆದರುವ) ಕಡೆಗಣ್ಣಿನಿಂದ ಮನೋಜನ(ಮನ್ಮಥನ ಹೂವಿನ) ಅಸ್ತ್ರವನ್ನೂ, ಸಾಲಿಡುವ ಉದ್ಯತ್ (ಮೇಲೆದ್ದ) ಮೇಖಲಾ (ಡಾಬಿನ) ಕೂಜಿತ (ಮಂಜುಳವಾದ ರವ)ದಿಂದ ಅತನು (ಮನ್ಮಥನ) ಕೋದಂಡದ ಟಂಕಾರವನ್ನೂ, ಕನ್ನಡಿಸುವ (ತೆರದಿಂದ); ಅಂಘ್ರಿ (ಹೆಜ್ಜೆಗಳ) ನ್ಯಾಸದಿಂ (ಇಡುವಿಕೆಯಿಂದ) ತಾವರೆಯನ್ನು ಕೆದರುವ (ತೆರದಿಂದ); ಮಂದಸ್ಮಿತ (ಮೆಲುನಗೆಯನ್ನು) ದ್ಯೋತ(ಬೆಳಗುವ ನೆಪ)ದಿಂದ ಮತ್ತೊಂದು ಇಂಗಡಲಂ (ಹಾಲಿನ ಕಡಲನ್ನು) ಉತ್ಪಾದಿಸು(ಉಂಟು ಮಾಡು)ವ (ತೆರದಿಂದ) ದೇವಿ(ಮದುವಣಗಿತಿ) ಆನಂದದಿಂದ ಬಂದಳು.

೯. ಉರದೊಳ್ (ಎದೆಯಲ್ಲಿ) ಹಾರದ ಅಂಶು (ಕಿರಣ), ಗಂಡಸ್ಥಳಿ (ಹಣೆಗೆನ್ನೆ)ಯಲ್ಲಿ ಅಮಲವಾದ ಕರ್ಣಾವತಂಸ (ಕಿವಿಯೊಡವೆಯು) ಅಂಶು, ಮತ್ತಂ (ಅಲ್ಲದೆ) ಶಿರದಲ್ಲಿ ರತ್ನಾವಳೀ (ರತ್ನಗಳ ಸಾಲಿನ) ಶೇಖರ (ಕಿರೀಟದ) ಶಿಖರ (ತುದಿಯ) ಸಮುಕ್ತಾ (ಮುತ್ತಿನ) ಅಂಶುಗಳು, (ಇವು) ನೃತ್ಯವನ್ನು ವಿಸ್ತರಿಸುತ್ತಿರಲಾಗಿ, ಸಿದ್ಧವಿದ್ಯಾಧರ ದಿವಿಜ (ದೇವತೆಯರುಗಳ) ಕುಮಾರರುಗಳನ್ನು (ತನ್ನ) ಚೆಲುವಿನಿಂದ ಮಾಂಕರಿಸು(ಧಿಕ್ಕರಿಸು)ತ್ತ, ನಿರುಪಮವಾದ ಶೃಂಗಾರದ ಸಾರವನ್ನು ಆಸಾದಿತ (ಹೊಂದಿದಂಥ) ಕುಮಾರನು ಬಂದನು.

೧೦. ಹಾಸಿದ ದಣಿಂಬ(ಪಟ್ಟವಸ್ತ್ರ)ದ, (ಕಾಲಿನ) ಉಗುರುಗಳ, ಕೆಂಪಾದ ಅಡಿ(ಪಾದ)ಗಳ, ಚರಣ (ಕಾಲಿನ) ಭೂಷಣ(ಒಡವೆ)ಗಳ ರುಚಿಗಳ್ (ಕಾಂತಿಗಳು) ಬಾಸಣಿಸೆ (ಒಂದರ ಮೇಲೆ ಒಂದು ಮುಚ್ಚಲು) ಚಿತ್ರಪಟವನ್ನು ಹಾಸಿದ ಹಾಗೆ ಇರಲು, ವಧೂವರರು ನಡೆದುಬಂದರು.

೧೧ ಕಿವಿ(ಯಿಂದ ಕೇಳಿ ಉಂಟಾದ)ಬೇಟ(ವಿರಹ)ವನ್ನು ಇರಿಸುತ್ತಾ (ತಾಳಿಕೊಳ್ಳುತ್ತಾ ಇರಲು;) ನವ(ಹೊಸ)ವರನನ್ನು ನೋಡುವ, ಅಪ್ಪುವ ಉತ್ಕಳಿತೆ (ಕಾತರ, ಉತ್ಕಂಠಿಕೆ)ಯಿಂದ (ಆ) ಯುವತಿಯ ಕಣ್ಣೂ ಮನಸ್ಸೂ ಜವನಿಕೆ(ತೆರೆ)ಯನ್ನು ಕನ್ನವಿಕ್ಕಲು ಏನು ಅಟವುಟಿಸಿ (ಒಂದನ್ನೊಂದು ಮೇಲೆ ಬಿದ್ದು ಮೀರಿಸಿ)ದುವೋ?

೧೨ ಜವನಿಕೆ (ತೆರೆ) ಓಸರಿಸುವುದುಂ (ಪಕ್ಕಕ್ಕೆ ಸರಿಯುಲಾಗಿ), ಆ ಯುವತಿ ನವ ವರನನ್ನು (ತನ್ನ) ಕಣ್ಣ ಬೆಳಕಿನಿಂದ ಮುಸುಕಿದಳು. ಮಾಧವನ ಈಕ್ಷಣ (ಕಣ್ಣುಗಳ) ಕಾಂತಿ ಅವಳ ಸರ್ವಾಂಗವನ್ನು ಪದೆದು (ಪ್ರೀತಿಯಿಂದ) ಅಪ್ಪಿತು.

೧೩. ನಾರಿಯರು ಆದರದಿಂದ ಸೇಸೆ(ಅಕ್ಷತೆ)ಗಳನ್ನು ಇಕ್ಕೆ (ತಳಿಯಲಾಗಿ); (ಅಷ್ಟಕ್ಕೆ ಸುಮ್ಮನೆ) ಇರದೆ, ಎಯ್ದೆ (ಬಹಳವಾಗಿ) ಹಾಡಲು; ಕುಲಪ್ರಧಾನೆಯರು ಶೃಂಗಾರದ ಪಯೋಧಿ (ಸಮುದ್ರವು) ಘೂರ್ಣಿಸು (ಮೊರೆಯು)ವ ಹಾಗೆ ಕುಣಿದಾಡಲು; ಉದಾತ್ತಮನಂ (ದೊಡ್ಡ ಎತ್ತರದ ಮನಸ್ಸುಳ್ಳ) ವಸುಧಾಧಿನಾಯಕ(ರಾಜ)ನು ಚಾರು (ಮನೋಹರವಾದ) ಸುವರ್ಣ (ಚಿನ್ನದ) ಕುಂಭ (ಕೊಡಗಳಲ್ಲಿ) ಭೃತ (ತುಂಬಿದ) ಮಂಗಲವಾರಿಯುಂ(ಮಂಗಳದ ಜಲವನ್ನು)ಎತ್ತಿಕೊಂಡು, ವಧೂವರರಿಗೆ ಕೈಗೆ(ಧಾರೆಯ) ನೀರನ್ನು ಎರೆದನು.

೧೪. (ಆಗ) ದುಂದುಭಿಗಳ ಧ್ವನಿ ದೆಸೆ(ದಿಕ್ಕು)ಗಳನ್ನು ಮುಸುಕಿತು; ಮಾಂಗಲ್ಯ (ಮಂಗಲಸೂಚಕವಾದ) ಗೀತ (ಹಾಡುಗಳ) ರುತಿ (ಧ್ವನಿ) ಆಗಸ(ಆಕಾಶ)ವನ್ನು ತುಂಬಿದುದು; ಶಂಖದ ಧ್ವನಿ ರೋದಸೀ (ಆಕಾಶ)ಮಂಡಲವನ್ನು ತಳ್ವೊಯ್ದು (ಮುಟ್ಟಿತಾಗಿ) ಪೂರಿಸಿದುದು (ತುಂಬಿತು.)

೧೫. ಪ್ರಿಯತರವಾದ ಲವಂಗ ಮತ್ತು ಲವಲೀ (ಎಂಬ ಬಳ್ಳಿಗಳು) ಎರಡಕ್ಕೂ ಒಂದೇ ಒಂದು ಶಾಖಾ (ಕೊಂಬೆಗೆ) ಯೋಗಂ (ತಬ್ಬಿಹಬ್ಬಿಕೊಳ್ಳುವುದು) ನಯದಿಂ(ಯುಕ್ತವಾದ ರೀತಿಯಲ್ಲಿ) ಸಮನಿಪ (ಉಂಟಾಗುವ) ಓಲ್(ಹಾಗೆ) ಆ ಪ್ರಿಯನಿಗೂ ಆ ಪ್ರಿಯೆಗೂ ಪಾಣಿಗ್ರಹಣ ಆಯಿತು.

೧೬. ಈ ಪದ್ಯ ಹಿಂದೆಯೇ ಪುಟ ೨೧ರಲ್ಲಿ (ಅನುವಾದ–ಪುಟ ೭೪) ಬಂದಿದೆ.

೧೭. (ಹೂವು ಹಣ್ಣುಗಳನ್ನು ತಾಳಿ) ಬಂದ ವಸಂತದಲ್ಲಿ ಅನಂಗ (ಮನ್ಮಥ)ನು (ತನ್ನ) ಅಂಗನೆ(ಸತಿ)ಯ ಸಹಿತವಾಗಿ ಎಳ್ತಂದು (ಬಂದು) ಕೆಂಪಾದ ತಳಿರ(ಚಿಗುರ)ನ್ನು ಏರಿದ (ಪಡೆದ) ಮಾವನ್ನು ಬಲವಂದು (ಪ್ರದಕ್ಷಿಣೆಮಾಡಿ) ಮನ್ನಿಸು(ಮರ್ಯಾದೆ ಮಾಡು)ವ ಅಂದದೆ(ರೀತಿಯಲ್ಲಿ) ಆ ದಂಪತಿಗಳು ಅಗ್ನಿಯನ್ನು ಬಲಗೊಂಡರ.(ಪ್ರದಕ್ಷಿಣ ಮಾಡಿದರು.)

೧೮. ಕಡು (ಅಧಿಕವಾಗಿ) ಮೇಳ (ಸ್ನೇಹ) ಉಳ್ಳವರು "ಕಾಲು ಹಿಡಿ! ಹಿಡಿ!" ಎನ್ನಲು; ಕುವರ(ಕುಮಾರ)ನು ಓಪಳ (ತನ್ನ ಪ್ರಿಯೆಯ) ಎಸೆವ (ಹೊಳೆಯುವ) ಉಂಗುಷ್ಟವನ್ನು ಹಿಡಿದು, ನಸುನಗುತ್ತಾ ಆಕೆಯನ್ನು ಕಡುರಾಗದಿಂದ ಸಪ್ತಪದಿಗಳನ್ನು ಮೆಟ್ಟಿಸಿದನು

೧೯. "ನೀನು ನಿಟ್ಟೆಯ್ದೆ (ದೀರ್ಘಕಾಲ ಸುಮಂಗಲಿ) ಆಗು, ಪತಿಯಲ್ಲಿ ತೊಟ್ಟ (ಗಾಢವಾದ) ಅನುವಶೆ (ಅನುವರ್ತಿಸುವ ಗುಣ ಉಳ್ಳವಳು) ಆಗು, ಶೀಲವತಿಯಾಗು, ಚಿರಂ (ಸದಾಕಾಲವೂ) ನಿಟ್ಟಾಯು (ದೀರ್ಘಾಯುಸ್ಸು ಉಳ್ಳವಳು) ಆಗು!" ಎಂದು ಅಗಣ್ಯ (ಅಸಂಖ್ಯರಾದ) ಪುಣ್ಯಾಂಗನೆಯರು ಸೇಸೆ(ಅಕ್ಷತೆ)ಯನ್ನು ಇಟ್ಟರ್ (ತಳಿದರು.)

೨೦. ಅಣಚಿತನ (ಅಡಕದಿಂದಿರುವಿಕೆ, ವಿನಯ)ವನ್ನು ಕೈಕೊಳ್ಳು. ನಿನ್ನ ಓಲೆಭಾಗ್ಯದ ಭದ್ರ(ಮಂಗಳ)ಲಕ್ಷಣದ ಪದ(ಸ್ಥಾನ)ದಲ್ಲಿ ಸಂದು (ಸೇರಿ), ಈ ಸೌಭಾಗ್ಯದಿಂದ ಸ್ವಜನಗಳನ್ನು ತಣಿಸಿ (ತೃಪ್ತಿಪಡಿಸಿ), ಪೃಥ್ವೀರಾಜ್ಯವನ್ನು ಗೆಯ್(ಆಳು)" ಎಂದು ತತ್(ಆ) ನೃಪ(ರಾಜ)ನ ಪುತ್ರಿಗೆ ಆ ಕ್ಷಣದಲ್ಲಿ ಒಸೆದು (ಪ್ರೀತಿಯಿಂದ) ಎಯ್ದೆ (ಸುಮಂಗಲಿ)ಯರು ಎಲ್ಲರೂ ನೆರೆದು (ಸೇರಿ) ಅಂದು ಸೇಸಿಕ್ಕಿ(ಅಕ್ಷತೆ ಹಾಕಿ)ದರು.

೨೧. ಕೊಂಕಿ (ಬಳ್ಳಿಯಂತೆ ಬಳುಕಿ) ಕವಲ್ತು(ಕವಲು ಬಿಟ್ಟು)ತನ್ನನ್ನೆ ಪಳಂಚು(ತಾಗು)ವ ಕೇಕರ (ಕಡೆಗಣ್ ನೋಟದ) ಪಾತ (ಬೀಳುವಿಕೆ), ಎಳ್ದ(ಎದ್ದ) ರೋಮಾಂಕುರ (ನಿಲುಗೂದಲು), ಉಣ್ಮಿ (ಉಂಟಾಗಿ) ಹೊಮ್ಮುವ ಭಯ, ನಮಿತ (ತಗ್ಗಿಸಿದ) ಆನನಪದ್ಮರಾಗ (ಕಮಲದ ಕಾಂತಿಯಿರುವ ಮುಖ)ದಿಂದ ಕರೆಗಣ್ಮಿ (ಮಿತಿಮೀರಿ) ಸೂಸುವ (ಬಸಿ

ಯುವ) ಬೆವರು, ತಲೆದೋರುವ (ಕಾಣಿಸಿಕೊಳ್ಳುವ) ಲಜ್ಜೆ—(ಇವು) ನಾಡೆ (ವಿಶೇಷವಾಗಿ) ಚೆಲುವನ್ನು ಕೊಡಲು, ನೃಪರೂಪ(ದಲ್ಲಿರುವ) ಮನ್ಮಥ(ನಾದ ಆ ವರ)ನು (ಅವುಗಳನ್ನೆಲ್ಲಾ) ನೋಡುತ್ತ (ತನ್ನ) ಅಂಗನೆ (ಸತಿ)ಯನ್ನು ಈಕ್ಷಿಸಿ(ನೋಡಿ)ದನು.

೨೨. ನಸೆ(ಮನಸ್ಸಿನ ನವೆ)ಯ ಅಳಿಪಿಂ (ಆಸೆಯಿಂದ) ಪ್ರಿಯನ ಆನನ (ಮುಖ)ವನ್ನು ಈಕ್ಷಿಸಲು ಉಜ್ಜುಗೆ(ಉದ್ಯೋಗಿಸಿದವಳು, ತೊಡಗಿದ ವಳು) ಆಗಿ; ತಾನೇ ಲಜ್ಜಿಸಿ, ತಲೆಬಾಗಿ; (ಅದೇ ಪ್ರಿಯನ ಆನನವನ್ನು) ಮಣಿ (ರತ್ನದ) ಕುಣ್ಣಿಮ(ನೆಲ)ದಲ್ಲಿ ನೆರೆ (ಪೂರ್ತಿಯಾಗಿ) ನೋಡಿ; ಮತ್ತೆ (ಅದನ್ನೇ ತನ್ನ) ಮನಸ್ಸಿನೊಳಗೆ ಇಟ್ಟು, ತತ್ (ಆ) ನವ(ಹೊಸ ದಾದ) ಸುಖದ ಅನುಭವಕ್ಕೆ ಕಣ್ಣುಗಳನ್ನು ಅರೆ (ಅರ್ಧ) ಮುಚ್ಚಿ, ಅಂದು (ಆ ಹೊತ್ತಿನಲ್ಲಿ) ಶಶಿಪ್ರಭೆ ಪಸರಿಪ (ಹರಡುವ) ಹೋಮಧೂಮ ಹತಿಗೆ (ಹೋಮದ ಹೊಗೆ ಕಣ್ಣಿಗೆ ಹೊಡೆಯಿತೆಂದು) ದೂರನ್(ಆಕ್ಷೇಪವನ್ನು) ಏರಿಸುವಳು.

೨೩. "(ಎಲ ಎಲಾ!) ಇಂದ್ರ ರತಿಯೊಡನೆ ಎಂತು(ಹೇಗೆ) ನೆರೆದಂ (ಸೇರಿದ?) ಶಚಿಯಲ್ಲಿ ಸ್ಮರನು ನಾಡೆ (ಇಷ್ಟು ಚೆನ್ನಾಗಿ) ಎಂತು(ಹೇಗೆ) ಸಂಗತಿವಡೆದಂ (ಸೇರಿದ?) ದಲ್ (ಇದು ಆಶ್ಚರ್ಯ!)" ಎಂದು ಅವಳ ರೂಪವನ್ನೂ ಆತನ ಲೀಲೆಯನ್ನೂ, ಮತ್ತೆ ಅವಳ ಲೀಲೆಯನ್ನೂ ಆತನ ರೂಪವನ್ನೂ ಜನಪ್ರತತಿ (ಗುಂಪು) ಮನಕ್ಕೆ ಅತಿಶಯಮಾಗೆ(ಆಶ್ಚರ್ಯ ವುಂಟಾಗಲು) ವಿವಾಹಗೃಹದ ಅಂತರಾಳ(ಒಳಭಾಗ)ದಲ್ಲಿ ನಿಂತು ಮರಲ್ದು(ತಿರುಗಿ ತಿರುಗಿ) ನೋಡಿತು.

ಆಗ ಆ ವಿವಾಹಮಂಗಳ ಮಹೋತ್ಸವದ ಮಹಾಮಹಿಮೆಯಲ್ಲಿ—

೨೪. ತತ್(ಆ) ನರಪ (ದೊರೆಯ) ಅಂಗನಾಜನಂ (ಅಂತಃಪುರದ ಸ್ತ್ರೀಯರು) ಹಿತ (ತಮಗೆ ಬೇಕಾದ) ನುತ (ಪ್ರಸಿದ್ಧರಾದ) ಮಂತ್ರಿ, ಮಂಡಳಿಕ, ಮಿತ್ರ, ಪುರೋಹಿತ, ದಂಡನಾಯಕ, (ಇವರುಗಳಿಂದ) ಅನ್ವಿತ (ಕೂಡಿದ) ನಗರದ ಪ್ರಧಾನ(ಮುಖ್ಯರಾದ) ವನಿತಾನಿಕರಕ್ಕೆ (ಸ್ತ್ರೀಯರ ವರ್ಗಕ್ಕೆ) ಸುವರ್ಣ (ಚಿನ್ನದ) ಭಾಜನ (ಪಾತ್ರೆಗಳ)ಪ್ರತತಿ (ಸಾಲು)ಗಳಲ್ಲಿ ಕನತ್ (ಹೊಳೆಯುವ) ಮಣಿಯ (ರತ್ನದ), ಪೊಂಗಳ

(ಚಿನ್ನದ), ಕೇಳಿಯ (ಬಾಳೆಯ ಹಣ್ಣಿನ) ಬಾಗಿನಗಳನ್ನು (ತಮ್ಮ) ಸುತೆಯ (ಮಗಳ) ವಿವಾಹದ ಉತ್ಸವದಲ್ಲಿ ಇತ್ತುದು (ಕೊಟ್ಟಿತು)

೨೫ ಧರಣೀಪತಿ (ದೊರೆ) ಹೃದಯದಲ್ಲಿ '(ಇವರು) ನನ್ನವರು, ಪೆರರವರು, ಧನಿಕರು, ಬಡವರು, ಸಮಂತು (ಏನೇನನ್ನೂ) ಬೇಡದವರು, ಆಡುತರ್ಣ (ಬೆನ್ನುಹತ್ತಿ) ಬೇಡಿದವರು' ಎನ್ನದೆ; ರತ್ನದ, ಚಿನ್ನದ, ಚಿತ್ರವಸ್ತ್ರದ, ಹೊಸ ಪಚ್ಚ(ವಸ್ತ್ರ)ದ ಒಟ್ಟಿಲನೆ (ರಾಶಿಯನ್ನೇ) ಕೋಶಗೃಹವು ಬರಿದಾಗುವಂತೆ ಕೊಟ್ಟು; ಮಾಣದೆ (ಅಷ್ಟಕ್ಕೇ ನಿಲ್ಲಿಸದೆ) ಮಗುಳೆ (ಪುನಃ) ಆನೆಯನ್ನು ಕುದುರೆಯನ್ನು ಸಾರಿ ಬೀರಿದನು

## ಬಾಗಿಲು ತಡೆದದ್ದು

೧. ಗಂಡಹೆಂಡಿರ ಪಟ್ಟೆಬಾಸಿಗ, ಬೆನ್ನಿನ ಪಚ್ಚೆದಂಡೆ, ನಡುವಿನ ಚಿಂತಾಕು, ತೊಂಡಿಲು(ನೆತ್ತಿಯ ಮುತ್ತಿನ ಕುಚ್ಚು), ರವಿಕೆ ಮುಂತಾದ ಕಿರಿದನ್ನು ಒಳಗೆ ಊಳಿಗದ ಹೆಣ್ಣುಗಳು ಸೆಳೆದುಕೊಂಡರು

೨. ಹೋಗಲಿ ಎಂದು ಅವುಗಳನ್ನು ಹೊರಪಟಶಾಲೆ (ಬಾಗಿಲು ಪರದೆಯ ಆಚೆಕಡೆ)ಯಲ್ಲಿ ಕೊಟ್ಟು, (ಆ ಭರತಸುಭದ್ರೆಯರು)ರಾಗದಿಂದೆ (ಪ್ರೀತಿಯಿಂದ) ಒಳಗೆ ಎಯ್ದು (ಹೋಗು)ವಾಗ—ಗಂಗಾದೇವಿ ಸಿಂಧುದೇವಿಯರು ಬೇಗ ಎಯ್ದಿ (ಬಂದು), ಅರ್ತಿ(ಪ್ರೀತಿ)ಯಿಂದ ಬಾಗಿಲನ್ನು ತಡೆದರು.

೩. "ನಿಲ್ಲಣ್ಣಾ, ನೀನು ನಮ್ಮ ತವರುಮನೆಗೆ ಹೇಳದೆ, ಎಲ್ಲಿಯ ಹೆಣ್ಣನ್ನು ಕೈಹಿಡಿದು ಗೆಲ್ಲ(ಸುವರ್ಮಾನ)ದಿಂದ ಬರುತ್ತಿರುವೆ? ಅವಳು ಈಗ ನಮ್ಮೊಡನೆ ಸೊಲ್ಲಿಸಿ (ಮಾತನಾಡಿ) ಒಳಗೆ ಬರಲಿ." ಎಂದರು.

೪. "(ನೀನು) ಯಾರು, ಹೆಣ್ಣೆ? ನಿನ್ನ ಹೆಸರೇನು? ನೀನು ನಿಮ್ಮ ಭೂರಿ (ದೊಡ್ಡ) ಕುಟುಂಬವನ್ನು ಬಿಟ್ಟು ಯಾರ ಹಿಂದೆ ಎಯ್ದಿದೆ (ಹೊರಟೆ?) ನಿನಗೆ ಈತನು ಏನು ಅಹನು(ಆಗಬೇಕು?) ಕೋರಿ (ಆಲೋಚನೆಮಾಡಿ), ಹೇಳು." ಎಂದು ಕೇಳಿದರು.

೫. "ನಿನ್ನನ್ನು ನೋಡುವುದಕ್ಕಾಗಿ ನಿನ್ನ ತವರುಮನೆಗೆ ಬಂದರೆ, (ನಿನ್ನ) ಉನ್ನತವಾದ ಶಕ್ತಿಯನ್ನು ಕಾಣಿಸಿದೆ. ಇನ್ನು ಇಲ್ಲಿ ತೋರು,

ಒಪ್ಪೆ ನೋಡುವೆವು" ಎಂದರು (ಅದನ್ನು ಕೇಳಿ) ಚಕ್ರಿ(ಚಕ್ರವರ್ತಿ) "ಮುನ್ನ (ಮೊದಲು) ಆದುದು ಏನು ?" ಎಂದು ಕೇಳಿದನು.

೬. "ನಿನಗೆ ತನ್ನ ಉಂಗುರಗಳನ್ನು ತಂದುಕೊಡುತ್ತೇವೆ" ಎಂದು ಅನುವಿಸಿ(ಸಂದರ್ಭಮಾಡಿಕೊಂಡು) ನಾವು ಬರುವಾಗ ತೊನೆದು(ನಮ್ಮ ಕಡೆಗೆ ಬಾಗಿ) ಒಬ್ಬರೊಬ್ಬರನೊಂದೊಂದು ಕೈಯಲ್ಲಿ ಉಬ್ಬಿನಿಂದ ಈಕೆ ತೆಗೆದು ನಿಲ್ಲಿಸಿದಳು

೭. "ಕುಳಿತು, ಏಳದೆ, ಇಬ್ಬರನ್ನೂ ಬರ (ತನ್ನ ಕಡೆಗೆ ಬರುವಂತೆ) ಸೆಳೆದು, ಈಕೆ ಉಂಗುರಗಳನ್ನು ಸೆಳೆದುಕೊಂಡಳು. (ಆ) ಬಲುಮೆಯ (ಸಾಮರ್ಥ್ಯವನ್ನು) ಇಲ್ಲಿ ತೋರಲಿ." ಎಂದರು. ಆದಕ್ಕೆ ನೃಪತಿ ತನ್ನ ಲ್ಲಿಯೇ ಮೆಚ್ಚಿ ನಕ್ಕನು.

೮. "ನುಡಿ, ಹೆಣ್ಣೆ." ಎನ್ನುವರು; (ಅವಳು) ಸುಮ್ಮನಿರುವಳು. "ನಮ್ಮನ್ನು ಒಡೆಹೊಯ್ದು (ಒಟ್ಟಿಗಿರುವವರು ಬೇರಾಗುವಂತೆ ತಳ್ಳಿ) ಹೋಗು." ಎನ್ನುವರು; ಆದಕ್ಕೆ (ಆಕೆ) ಮುಡಿಬಾಗಿ (ತಲೆ ಬಗ್ಗಿಸಿ) ನಗುತ್ತಿರುವಳು. "ಅಲ್ಲದಿದ್ದರೆ, ತಪ್ಪು (ಮಾಡಿದ್ದಕ್ಕೆ ಪರಿಹಾರ)ಕೊಡು (ಕೊಡದೆ ಹಾಗೆಯೇ) ಬಿಡುವುದಿಲ್ಲ." ಎಂದು ಕೂಡಿ (ಒಟ್ಟಿಗೆ) ಎಂದರು.

೯. "ನನ್ನ ಒಳಗಾದವರು ಮಾಡಿದ ತಪ್ಪನ್ನು ನನ್ನದೆಂದೇ ಕಾಣಿ ರಕ್ಕ. ನಾನು ನಿಮ್ಮನ್ನು ಮನ್ನಿಸು(ಮರ್ಯಾದೆಮಾಡು)ತ್ತೇನೆ." ಎಂದನು ಚಕ್ರಿ. "ಮನ್ನಣೆ ಏನು ?" ಎಂದರು, ಅವರು.

೧೦ "ನಿಮ್ಮಿಬ್ಬರಿಗೂ ರತ್ನದಲ್ಲಿ, ಚಿನ್ನದಲ್ಲಿ ಮಾಡ(ಉಪ್ಪರಿಗೆಮನೆ) ಗಳು. ಒಬ್ಬರೊಬ್ಬರಿಗೂ ಚಿನ್ನದ ಉಯ್ಯಾಲೆ, (ಜೊತೆಗೆ) ಹನ್ನೆರಡು ಕೋಟಿಯ ಗ್ರಾಮವನ್ನು ಈವೆ (ಕೊಡುತ್ತೇನೆ.) (ಅದಕ್ಕೆ ಸಾಕ್ಷಿ ಯಾಗಿ) ರತ್ನದ ಮುದ್ರಿಕೆಯ (ಉಂಗುರವನ್ನು) ಹಿಡಿಯಿರಿ." ಎಂದು ಕೊಟ್ಟನು.

೧೧. (ಆಗ ಆ) ಜಗಕ್ಕೆ ಅಗ್ರಗಣ್ಯ(ನಾದ ಭರತ)ನ ಸೋದರಿಯರು ನಗುತ್ತ "ಸ್ತ್ರೀ ಪುರುಷರು (ಗಂಡಹೆಂಡಿರು ಆದ ನೀವು) ಒಲಿದು ಸುಖ (ವಾಗಿ) ಬಾಳಿರಿ." ಎಂದು ಒಗುಮಿಗೆ (ಅತಿಶಯವಾಗಿ) ಸೇಸೆ (ಅಕ್ಷತೆ) ಯನ್ನು ಇಟ್ಟು, ಅಗಣಿತವಾದ ಐಶ್ವರ್ಯದ ಲಾಭದಿಂದ ಹೋದರು.

## ಹೆತ್ತವರ ಹಿತವಚನ—ಗಂಡಿಗೆ, ಹೆಣ್ಣಿಗೆ

೧

ರಾಜಾಧಿರಾಜನು ಅಳಿಯನ ಮುಖವನ್ನು ನೋಡಿ—

೧. "ನಿನ್ನ ಅನ್ವವಾಯ(ವಂಶ)ದ ಉನ್ನತಿಯನ್ನು ಬಗೆದು (ಮನಸ್ಸಿನಲ್ಲಿಟ್ಟು), ಇವಳ ಅತಿಸ್ನೇಹದ ಸಂಬಂಧವನ್ನು ನೀನು ಬಗೆದು, ಸಂದ (ಹೊಂದಿಕೊಂಡ) ನಮ್ಮ ನಣ್ಪಂ(ನಂಟುತನವನ್ನು) ಬಗೆದು, (ಇವಳು) ಅರಿಯದೆ ಏನಾದರೂ ಎಂದಾಗಳೂ (ಕೋಪಿಸದೆ) ಮೆಲ್ಲಗೆ ನೀನು ಕಲಿಸುವುದು. ನಮ್ಮನ್ನು ನೆನೆದು (ಜ್ಞಾಪಿಸಿಕೊಂಡು) ಎದೆಗಿಡದ (ವ್ಯಸನಪಡದ)ಹಾಗೆ ಈ ಮೃಗಶಾಬ(ಜಿಂಕೆಯ ಮರಿಯಂತೆ) ಈಕ್ಷಾಲಕ್ಷಿಯಂ (ನೋಡುವ ಕಣ್ಣುಳ್ಳ ಈ ಶ್ರೀಮತಿಯನ್ನು) ಮನ್ನಿಸುವುದು (ನೋಡಿಕೊಳ್ಳುವುದು.) ವಜ್ರಜಂಘಾ, ಇನಿತಂ (ಇಷ್ಟನ್ನು) ನಾನು ಬೇಡಿದೆನು.

ಎಂದು ನುಡಿದು, ಲಕ್ಷ್ಮೀಮತಿ(ಯೆಂಬ) ಮಹಾದೇವಿ (ಪಟ್ಟದ ರಾಣಿ)ಯೂ ತಾನೂ ಆತ್ಮೀಯ(ತಮ್ಮ) ಪ್ರಿಯ ಆತ್ಮಜೆಯ (ಪ್ರೀತಿಯ ಮಗಳ) ಮುಖವನ್ನು ಅಳ್ಕರ್ತು (ಪ್ರೀತಿಯಿಂದ) ನೋಡಿ—

೨. "(ಗಂಡನ) ಮನಸ್ಸನ್ನು ಅರಿತು (ತಿಳಿದು) ಅಂಜಿ ಬೆಚ್ಚಿ ಬೆಸಕೆಯ್ (ಕೆಲಸಮಾಡು.) ನಿಜ (ನಿನ್ನ) ವಲ್ಲಭ(ಗಂಡ)ನು ಏನನ್ನು ಎಂದರೂ ಕಿನಿಸದೆ (ಕೋಪಗೊಳ್ಳದೆ) ಇರು. ಒಂದಿದ (ಪ್ರಾಪ್ತವಾದ) ಅಗ್ರಮಹಿಷೀ (ಪಟ್ಟದ ರಾಣಿಯ) ಪದ(ಸ್ಥಾನ)ದಲ್ಲಿ ಪದಸ್ಥೆ (ಪ್ರತಿಷ್ಠಿತಳು) ಆಗು. ಅಗಣ್ಯ ಪುಣ್ಯಧನರಾದ ನಂದನರನ್ನು ಪಡೆ" ಎಂದು ಅಮರ್ದು (ಗಾಢವಾಗಿ) ಅಪ್ಪಿಕೊಂಡು, ತತ್ (ಆ) ತನುಜೆಯ (ಮಗಳ) ಅಗಲಿಕೆಯ(ಕಾಲದ)ಲ್ಲಿ ಬಸ(ತಡೆಯಲು ವಶ)ವಲ್ಲದ ಬಾಷ್ಪವಾರಿಯಂ (ಕಣ್ಣೀರನ್ನು) ನೆಗಪಿದರ್ (ಮೇಲೆ ತಂದರು.)

ಆಗ ವಜ್ರದಂತನು ಅನಂತ(ವಾದ) ಸಾಮಂತರು, ಅಂತಃಪುರದ ಪರಿವಾರ ಬೆರಸು(ಇವರೊಡನೆ) ಹೋಗಿ, ಮಗಳನ್ನೂ ಅಳಿಯನನ್ನೂ ಕಿರಿದು (ಸ್ವಲ್ಪ) ಅಂತರಂಬರಂ (ದೂರದವರೆಗೂ) ಕಳುಹಿ ಮಗುಳ್ವ (ಹಿಂದಿರುಗುವ) ಆಗ—

೩. **ಪೊಡೆವಡು (ನಮಸ್ಕರಿಸು)ವ, ಅಪ್ಪಿಕೊಳ್ಳುವ, 'ನೆನೆಯುತ್ತಿರಿ'**

ಎಂಬ, ಸಮಸ್ತ ವಸ್ತುವನ್ನು ಕೊಡುವ, ಪಲವರ್ೞಯಿಂ (ಹಲವು ಸಲ, ಹಲವು ವಿಧವಾಗಿ) ಹರಸಿ ಸೇಸೆ(ಅಕ್ಷತೆ)ಯುನ್ನು ಇಕ್ಕುವ, ಬುದ್ಧಿ ಹೇಳುವ, 'ಇವಳು ನಿಮಗೆ ಕೈಯೆಡೆ' (ಇವಳನ್ನು ನಿಮಗೆ ಒಪ್ಪಿಸಿದ್ದೇವೆ) ಎಂದು ಒಡಂಬಡಿಸುವ, ನಲ್ಲರ ಅಗಲಿಕೆಗೆ ಕಣ್ಣಿನ ನೀರುಗಳನ್ನು ಮಿಡಿಯುವ—(ಈ ರೀತಿ) ಬಹುಪ್ರಕಾರವಾದ ಜನರ ಸಂಕಟವು ಆ ಪ್ರಯಾಣ(ಕಾಲ)ದಲ್ಲಿ ಒಪ್ಪಿತು (ಕಂಡುಬಂತು)

೨

ಜಯವರ್ಮ ಮಂಡಲೇಶ್ವರನು (ತನ್ನ) ಮಗಳನ್ನೂ ಅಳಿಯನನ್ನೂ ಬರಿಸಿ(ಕೊಂಡು) ಕುಳ್ಳಿರಿಸಿ—

೪. "ನಿನ್ನಯ ಕೂಟ(ಸಂಬಂಧ)ವನ್ನು ಬಯಸಿ ಪೆತ್ತ(ಪಡೆದ)ವಳು; ಎಂತುಂ(ಹೇಗೂ) ನಿನ್ನ ಮನಸ್ಸಿಗೆ ಒಡಂಬಡಂ (ಒಪ್ಪಿಗೆಯನ್ನು) ದಿಟಂ (ಖಂಡಿತವಾಗಿಯೂ) ಮಾಡಳು. ಅದು (ಏನೋ) ದೈವಕೃತವಾಗಿ (ಈ ಸಂಬಂಧ) ದೊರೆಕೊಂಡುದು (ಆಯಿತು) ಅಪ್ಪೊಡಂ (ಆದರೂ), ಎಮ್ಮ (ನಮ್ಮ) ಕಾರಣದಿಂದ, ಮನ್ನಿಪುದು (ಇವಳನ್ನು ಚೆನ್ನಾಗಿ ಕಾಣುವುದು.) ಇತ್ತಣ (ಈ ತವರುಮನೆಯ) ಹಂಬಲನ್ನು ಈಕೆ ಮಾಡದಂತೆ ಇನ್ನು ನಡೆಯಿಸಿಕೊಳ್ಳುವುದು. ಒಂದೇ ತೆರನಾಗಿ ಇರುವುದು. ಇದನ್ನು ಸೆರಗೊಡ್ಡಿ ಬೇಡಿದೆನು."

ಎಂದು ಕುಮಾರನಿಗೆ ಹೇಳಿ, ತಾನೂ ಜಯಶ್ರೀ(ಯೆಂಬ) ಮಹಾದೇವಿ(ಪಟ್ಟದ ರಾಣಿ)ಯೂ ಶಶಿಪ್ರಭೆಯ ಮುಖವನ್ನು ಪ್ರೇಮರಸದ ವಿಸರ(ವಿಸ್ತಾರ)ದಲ್ಲಿ ಲುಳಿತ (ಚಲಿಸುತ್ತಿರುವ) ಲೋಚನ (ಕಣ್ಣು)ಗಳಿಂದ ನೋಡಿ—

೫ "ಅಕ್ಕ! ನಿಜ(ನಿನ್ನ) ಪ್ರಿಯನಿಗೆ (ಆತನ) ಮನದ ಅನ್ನದೆ (ಹಾಗೆಯೇ) ನೀನು ಬೆಸಕೆಯ್ವುದು (ಹೇಳಿದಂತೆ ಕೇಳಬೇಕು.) ಆಗಳುಂ (ಯಾವಾಗಲೂ) ಮಕ್ಕಳ ಮಾಳ್ಕೆ(ರೀತಿ)ಯಿಂದ ಇರದೆ, ನೀನು ಒಡವಂದ (ಸಂಗಡ ಇರಲು ಬಂದ, ಸೇರಿದ) ಜನಕ್ಕೆ ಸಂತಸಂ (ಸಂತೋಷ) ಮೊಕ್ಕಳ (ಅಧಿಕ)ವಾಗುವಂತೆ ಮನ್ನಿಪುದು (ಮರ್ಯಾದೆಯಿಂದ ನಡೆಯುವುದು.) ಮಾವನ ಪೆರ್ಮೆ (ಹಿರಿಮೆ)ಗೂ ಅತ್ತೆಯ

ಒಲ್ಮೆ (ಪ್ರೀತಿ)ಗೂ ತಕ್ಕ (ಯೋಗ್ಯವಾದ) ನೆಗಳ್ತೆ (ನಡತೆ)ಯನ್ನು ನೆಗಳ್ವುದು (ನಡೆಯುವುದು) ಪೆತ್ತ (ನಿನ್ನನ್ನು ಹೆತ್ತ) ನಮಗೂ ಪ್ರಮೋದ (ಸಂತೋಷ)ವನ್ನು ಈವುದು (ಕೊಡುವುದು.)

ಎಂದು ಬುದ್ಧಿಹೇಳಿ, ಶೇಷಾಕ್ಷತೆಯನ್ನು ಇಕ್ಕಿ, ಮಂಗಳವಾದ ಮೃದಂಗದ ರವ (ಧ್ವನಿ) ಎಸೆಯೆ (ಹಿತವಾಗಿ ಕೇಳಿಸಲು,) ಪುರಮಂ (ಪುರದಿಂದ) ಹೊರಗೆ ಹೊರಟು, ಕಿರಿದು ಅಂತರಮಂ (ದೂರ)ಕಳುಹಿಸಿ ಮಗುಳ್ದರ್ (ಹಿಂದಿರುಗಿದರು.)

# ಮದುವೆಯ ಕೆಲವು ಮುಖ್ಯ ಮಂತ್ರಗಳು

'**ಮದುವೆ**' ಎಂಬುದು '**ಪಾಣಿಗ್ರಹಣ**' ದಿಂದ ಪ್ರಾರಂಭವಾಗಿ '**ಸಪ್ತಪದಿ**'ಯಲ್ಲಿ ಸಮಾಪ್ತಿಗೊಳ್ಳುತ್ತದೆ. ಮಾನವ ಧರ್ಮಶಾಸ್ತ್ರವು ಇದನ್ನು ಕುರಿತು ಹೀಗೆ ಹೇಳುತ್ತದೆ:

**ಪಾಣಿಗ್ರಹಣಿಕಾ ಮನ್ತ್ರಾ ನಿಯತಂ ದಾರಲಕ್ಷಣಮ್ ।**

**ತೇಷಾಂ ನಿಷ್ಠಾ ತು ವಿಜ್ಞೇಯಾ ವಿದ್ವದ್ಭಿಃ ಸಪ್ತಮೇ ಪದೇ ॥**

ಎಂದರೆ–ಪಾಣಿಗ್ರಹಣದ ಮಂತ್ರ ಹೆಂಡತಿಯಾದುದಕ್ಕೆ ತಪ್ಪದ ಗುರುತು. ಏಳನೆಯ ಹಜ್ಜೆಯಾದ ಮೇಲೆ ಈ ಮಂತ್ರಗಳು ಮುಗಿದುವೆಂದು ವಿದ್ವಾಂಸರು ತಿಳಿಯತಕ್ಕದ್ದು

ಮದುವೆಯ ಮೂಲ ಉದ್ದೇಶವೇನು? ಇದು ಪಾಣಿಗ್ರಹಣದ ಪ್ರಥಮ ಮಂತ್ರದಲ್ಲೇ ಸುಸ್ಪಷ್ಟವಾಗಿದೆ:

**ಗೃಭ್ಣಾಮಿ ತೇ ಸುಪ್ರಜಾಸ್ತ್ವಾಯ**
**ಹಸ್ತಂ ಮಯಾ ಪತ್ಯಾ ಜರದಷ್ಟಿರ್ಯಥಾಸಃ ।**
**ಭಗೋ ಆರ್ಯಮಾ ಸವಿತಾ ಪುರಂಧಿ-**
**ರ್ಮಹ್ಯಂ ತ್ವಾದುರ್ಗಾರ್ಹಪತ್ಯಾಯ ದೇವಾಃ ॥**

ಎಂದರೆ—ಒಳ್ಳೆಯ ಪ್ರಜೆಯನ್ನು ಪಡೆಯುವುದಕ್ಕಾಗಿ, ಪತಿಯಾದ ನನ್ನೊಡನೆ ನಿನಗೆ ಮುಪ್ಪು ಬರುವವರೆಗೂ ನೀನು ಇರಬೇಕೆಂದು ನಾನು ನಿನ್ನ ಕೈ ಹಿಡಿಯುತ್ತೇನೆ ಭಗ, ಆರ್ಯಮಾ, ಸವಿತಾ, ಪುರಂಧಿ ಎಂಬ ದೇವತೆಗಳು ಗಾರ್ಹಪತ್ಯಕ್ಕಾಗಿ ನಿನ್ನನ್ನು ನನಗೆ ಕೊಟ್ಟಿದ್ದಾರೆ.

ಮುಂದೆ ವಧುವನ್ನು ಕುರಿತು ಹೇಳುತ್ತಾರೆ:

**ವೀರಸೂರ್ದೇವಕಾಮಾ ಸ್ಯೋನಾ ಶಂ ನೋ ಭವ ॥**

ಎಂದರೆ—ವೀರರೂ ದೇವತೆಗಳಲ್ಲಿ ಆಸೆಯುಳ್ಳವರೂ ಆದ ಮಕ್ಕಳನ್ನು ಹೆತ್ತು, ನಮಗೆ ಶುಭವನ್ನೂ ಹಿತವನ್ನೂ ಉಂಟುಮಾಡುವವಳಾಗು.

'ಸುಪ್ರಜಾಸ್ತ್ವ' ಎಂಬುದು ಇದೇ ವಿವಾಹ ಮಂಗಲದ ಮುಖ್ಯೋದ್ದೇಶವೆಂಬುದು ಸಪ್ತಪದಿಯ ಅನಂತರ ಗಂಡು ಹೆಣ್ಣಿಗೆ ಹೇಳುವ ಈ ಮಂತ್ರದಲ್ಲಿ ಇದೆ:

ತಾವೇಹಿ ಸಂಭವಾವ ಸಹ ರೇತೋ
ದಧಾವಹೈ ಪುಂಸೇ ಪುತ್ರಾಯ ವೇತ್ತವೈ ||

ಎಂದರೆ—ಬಾ, ಪ್ರಜೆಯನ್ನು ಪಡೆಯೋಣ; ಗಂಡುಮಗನನ್ನು ಹೊಂದುವುದಕ್ಕಾಗಿ ರೇತಸ್ಸನ್ನು ಒಟ್ಟಿಗೆ ಇರಿಸೋಣ.

ಮುಂದೆ, ಗೃಹಪ್ರವೇಶವಾಗುವಾಗ, ಹೆಣ್ಣನ್ನು ಕುರಿತು ಹೀಗೆ ಹೇಳುತ್ತಾರೆ:

ಇಹ ಪ್ರಿಯಂ ಪ್ರಜಯಾ ತೇ ಸಮೃಧ್ಯತಾ-
ಮಸ್ಮಿನ್ ಗೃಹೇ ಗಾರ್ಹಪತ್ಯಾಯ ಜಾಗೃಹಿ |
ಏನಾ ಪತ್ಯಾ ತನ್ವಂ ಸಂಸೃಜ-
ಸ್ವಾಥಾ ಜೀವ್ರೀ ವಿದಥಮಾವದಾಸಿ ||

ಎಂದರೆ—ಪ್ರಜೆಯನ್ನು ಪಡೆಯುವುದರಿಂದ ನಿನಗೆ ಇಲ್ಲಿ ಸಂತೋಷದ ಸಮೃದ್ಧಿಯಾಗಲಿ. ಈ ಮನೆಯಲ್ಲಿ ಗೃಹಸ್ಥಧರ್ಮವನ್ನು ನಡಸುತ್ತಾ ಎಚ್ಚರದಿಂದಿರು. ಈ ನಿನ್ನ ಪತಿಯೊಡನೆ ನೀನು ಸೇರಿ ಸೃಷ್ಟಿಸು. ವಯಸ್ಸು ಆದ ಹಾಗೆಲ್ಲಾ ಗೃಹಸ್ಥಧರ್ಮವನ್ನು ಬೋಧಿಸು.

ಮತ್ತೂ ಮುಂದೆ, ಗಂಡಹೆಂಡಿರು ತಾವು ಒಟ್ಟಿಗೆ ಆಗುವ ಆ ರಾತ್ರಿಯಲ್ಲಿ ಹೆಣ್ಣು ಗಂಡಿಗೆ ಹೇಳುತ್ತಾಳೆ:

ಅಪಶ್ಯಂ ತ್ವಾ ಮನಸಾ ಚೇಕಿತಾನಂ
ತಪಸೋ ಜಾತಂ ತಪಸೋ ವಿಭೂತಮ್ |
ಇಹ ಪ್ರಜಾಮಿಹ ರಯಿಂ ರರಾಣಃ
ಪ್ರಜಾಯಸ್ವ ಪ್ರಜಯಾ ಪುತ್ರಕಾಮ ||

ಎಂದರೆ—ನೀನು ನನ್ನ ಮನಸ್ಸನ್ನು ಬಲ್ಲೆ ಎಂಬುದನ್ನು ನನ್ನ ಹೃದಯ ಬಲ್ಲುದು. ನೀನು ತಪಸ್ಸಿನಿಂದ ಹುಟ್ಟಿದವನು, ತಪಸ್ಸಿನಿಂದ ಬೆಳೆದವನು ಎಂದೂ ಬಲ್ಲೆ. ಇಲ್ಲಿ ನನಗೆ ಪ್ರಜೆಯನ್ನೂ ಸಂಪದವನ್ನೂ ಕೊಟ್ಟು, ಪುತ್ರಕಾಮನಾದ ನೀನು ನಮ್ಮ ಪ್ರಜೆಯ ಮೂಲಕ ಮತ್ತೆ ಸೃಷ್ಟಿಹೊಂದು.

ಹೆಣ್ಣಿನ ಈ ಕರೆಗೆ ಗಂಡು ಹೇಳುತ್ತಾನೆ:

ಅಪಶ್ಯಂ ತ್ವಾ ಮನಸಾ ದೀಧ್ಯಾನಾಂ
ಸ್ವಾಯಾಂ ತನೂಂ ಋತ್ವಿಯೇ ನಾಥಮಾನಾಮ್ |

ಉಪ ಮಾಮುಚ್ಚಾ ಯುವತಿರ್ಬಭೂಯಾಃ
ಪ್ರಜಾಯಸ್ವ ಪ್ರಜಯಾ ಪುತ್ರಕಾಮೇ ||

ಎಂದರೆ—ನಿನ್ನ ಮನಸ್ಸಿನಲ್ಲಿರುವುದನ್ನೂ ನೀನು ನನ್ನ ಸಂಗವನ್ನು ಬಯಸುವೆಯೆಂಬುದನ್ನೂ ನಾನು ಬಲ್ಲೆ. ಯುವತಿಯಾಗಿರುವ ನೀನು ನನ್ನ ಆಲಿಂಗನವನ್ನು ಪಡೆದು, ಪುತ್ರಕಾಮೆಯಾದ ನೀನು ನಮ್ಮ ಪ್ರಜೆಯ ಮೂಲಕ ಮತ್ತೆ ಸೃಷ್ಟಿಹೊಂದು.

ಇದು ಮದುವೆಯನ್ನು ಕುರಿತು ವೇದದ, ಆರ್ಯರ ಆದರ್ಶ. ಈ ಆದರ್ಶದ ಸಾಧನೆಯಲ್ಲಿ ಸತಿಪತಿಯರಿಗೆ ಇರಬೇಕಾದ ಏಕೋಭಾವ ಒಂದಲ್ಲ ಒಂದು ರೀತಿಯಾಗಿ ಮದುವೆಯ ಮಂತ್ರಗಳಲ್ಲಿ ಕಂಡುಬರುತ್ತದೆ.

ಇದು ಆರಂಭದಲ್ಲಿ ಆಶೀರ್ವಾದ:

ಇಹೇಮಾವಿಂದ್ರ ಸಂನೂದ ಚಕ್ರವಾಕೇವ ದಂಪತೀ |
ಪ್ರಜಯ್ಯೈನೌ ಸ್ವಸ್ತಕೌ ವಿಶ್ವಮಾಯುರ್ವ್ಯಶ್ನುತಾಮ್ ||

ಎಂದರೆ—ಹೇ ಇಂದ್ರ, ಈ ದಂಪತಿಗಳನ್ನು ಚಕ್ರವಾಕಗಳಂತೆ ಎಡೆ ಬಿಡದೆ ಇರಿಸು. ಇವರಿಗೆ ಮಕ್ಕಳಾಗಲಿ. ಇವರ ಮನೆ ಚೆನ್ನಾಗಿರಲಿ. ಇವರಿಗೆ ಆಯುಸ್ಸು ತುಂಬಿ ಇರಲಿ.

ಮತ್ತೆ, ಹೆಣ್ಣಿಗೆ ಇದು ಆಶೀರ್ವಾದ:

ಸ್ಯೋನಾಭವ ಶ್ವಶುರೇಭ್ಯಃ ಸ್ಯೋನಾಪತ್ಯೋ ಗೃಹೇಭ್ಯಃ |
ಸ್ಯೋನಾಸ್ಯೈ ಸರ್ವಸ್ಯೈ ವಿಶೆ ಸ್ಯೋನಾ ಪುಷ್ಟಾಯೈಷಾಂ ಭವ ||

ಎಂದರೆ—ಅತ್ತೆಮಾವಂದಿರಿಗೆ ಸುಖ ತರುವವಳಾಗು. ಗಂಡನ ಮನೆಗೆ ಸುಖ ತರುವವಳಾಗು. ಸರ್ವರಿಗೂ ಸುಖ ತರುವವಳಾಗು. ಅವರ ಪುಷ್ಟಿಗಾಗಿ ಸುಖ ತರುವವಳಾಗು.

ತೆರೆ ಸರಿದು, ವಧೂವರರು ಒಬ್ಬರನ್ನು ಒಬ್ಬರು ಕಾಣುವ ಶುಭ ದೃಷ್ಟಿಯ ಸಮಯದಲ್ಲಿ ಇದು ಹೇಳುವ ಮಂತ್ರ:

ಇಮಾಂ ತ್ವಂ ಇಂದ್ರಮೀಢ್ವಃ
ಸುಪುತ್ರಾಂ ಸುಭಗಾಂ ಕೃಣು |
ದಶಾಸ್ಯಾಂ ಪುತ್ರಾನಾದೇಹಿ
ಪತಿಮೇಕಾದಶಂ ಕೃಧಿ ||

ಎಂದರೆ—ಹೇ ಇಂದ್ರ, ಇವಳನ್ನು ಸುಪುತ್ರವತಿಯಾಗಿ, ಸೌಭಾಗ್ಯವತಿಯಾಗಿ ಮಾಡು. ಇವಳಿಗೆ ಹತ್ತು ಮಕ್ಕಳನ್ನು ಕೊಡು, ಪತಿಯನ್ನು ಹನ್ನೊಂದನೆಯವನನ್ನಾಗಿ ಮಾಡು.

ಕನ್ಯೆಯನ್ನು ದಾನ ಮಾಡುವಾಗ ಹೆಣ್ಣಿನ ತಂದೆ ವರನನ್ನು ಹೀಗೆ ಪ್ರಾರ್ಥಿಸುತ್ತಾನೆ:

**ಧರ್ಮೇಚಾರ್ಥೇಚ ಕಾಮೇಚ**
**ನಾತಿಚರಿತವ್ಯಾ ತ್ವಯೇಯಮ್ ॥**

ಎಂದರೆ—ನೀನು ಧರ್ಮದಲ್ಲಿ, ಅರ್ಥದಲ್ಲಿ, ಕಾಮದಲ್ಲಿ ಇವಳನ್ನು ಮೀರಿ ನಡೆಯತಕ್ಕದ್ದಲ್ಲ.

ಅದಕ್ಕೆ ವರನು ವಾಗ್ದಾನ ಮಾಡುತ್ತಾನೆ:

**ನಾತಿಚರಿಷ್ಯಾಮಿ ॥**

ಎಂದರೆ—ನಾನು ಮೀರಿ ನಡೆಯುವುದಿಲ್ಲ

ಈ ವಾಗ್ದಾನದ ಅನಂತರವೇ ಪಾಣಿಗ್ರಹಣ. ಅದಕ್ಕೆ ಸಂಬಂಧಿಸಿದ ಮಂತ್ರವನ್ನು ಮೇಲೆ ಅರ್ಥದೊಡನೆ ಕೊಟ್ಟಿದೆ.

ಮುಂದೆ, ದಂಪತಿಗಳು ಹೋಮಮಾಡುವಾಗ, ಇದು ಮಂತ್ರ:

**ಇಮಾಮಗ್ನಿಸ್ತ್ರಾಯತಾಂ ಗಾರ್ಹಪತ್ಯಾಃ**
**ಪ್ರಜಾಮಸ್ಯೈ ನಯತು ದೀರ್ಘಮಾಯುಃ ।**
**ಅಶೂನ್ಯೋಪಸ್ಥಾ ಜೀವತಾಮಸ್ತು ಮಾತಾ**
**ಪೌತ್ರಮಾನಂದಮಭಿವಿವೃಧ್ಯತಾಮಿಯಂ ॥**

ಎಂದರೆ—ಗಾರ್ಹಪತ್ಯಾಗ್ನಿ ಇವಳನ್ನು ಕಾಪಾಡಲಿ. ಇವಳ ಮಕ್ಕಳಿಗೆ ದೀರ್ಘಾಯುಸ್ಸನ್ನು ಕೊಡಲಿ. ಇವಳ ಮಡಿಲು ಬರಿದಾಗಿ ಇರದಿರಲಿ. ಇವಳು ತಾಯಾಗಿ ಬದುಕಲಿ. ಮಕ್ಕಳನ್ನು ಪಡೆದು ಇವಳಿಗೆ ಆನಂದ ವರ್ಧಿಸಲಿ.

ಲಾಜಹೋಮದ ಕಾಲದಲ್ಲಿ ಇದು ಮಂತ್ರ:

**ಇಯಂ ನಾರ್ಯುಪಬ್ರೂತೇ ಲಾಜಾನಾವಪಂತಿಕಾ ।**
**ಆಯುಷ್ಮಾನಸ್ತು ಮೇ ಪತಿರೇಧಂತಾಂ ಜ್ಞಾತಯೋ ಮಮ ॥**

ಎಂದರೆ—ಇವಳು ಅರಳನ್ನು ಅಗ್ನಿಕುಂಡದಲ್ಲಿ ಹಾಕುತ್ತಾ ಹಾಕುತ್ತಾ,

ಹೇಳುತ್ತಾಳೆ: 'ನನ್ನ ಪತಿ ಆಯುಷ್ಮಂತನಾಗಲಿ! ನನ್ನ ಜ್ಞಾತಿಗಳು ಏಳಿಗೆ ಹೊಂದಲಿ!'

ಮತ್ತೆ ಇದೂ ಲಾಜಹೋಮದ ಮಂತ್ರ:

ಇಮಾಲ್ಲಾಜಾನಾ ವಪಾಮ್ಯಗ್ನೌ
ಸಮೃದ್ಧಿಕರಣಂ ತವ ।
ಮಮ ತುಭ್ಯ ಚ ಸಂವನನಂ
ತದಗ್ನಿರನುಮನ್ಯತಾಮಿಯಂ ಸ್ವಾಹಾ ॥

ಎಂದರೆ—ವಧೂ ಹೇಳುತ್ತಾಳೆ: 'ನಿಮಗೆ ಸಮೃದ್ಧಿಯಾಗಲೆಂದು ನಾನು ಅಗ್ನಿಯಲ್ಲಿ ಅರಳನ್ನು ಹಾಕುತ್ತಿದ್ದೇನೆ ನನಗೂ ತಮಗೂ ಹೊಂದಿಕೆಯಾಗಲಿ. ಅಗ್ನಿಯೂ ಆತನ ಪತ್ನಿಯಾದ ಸ್ವಾಹಾದೇವಿಯೂ ಇದನ್ನು ಅನುಮೋದಿಸಲಿ.

ಅಲ್ಲಿಂದ ಮೇಲೆ, ವರನು ವಧುವಿನ ಕಾಲಿಂದ ಶಿಲೆಯನ್ನು ಮೆಟ್ಟಿಸುವಾಗ ಹೇಳುತ್ತಾನೆ:

ಆರೋಹೇಮಮಶ್ಮಾನಮ್
ಅಶ್ಮೇವ ತ್ವಂ ಸ್ಥಿರಾ ಭವ ।
ಅಭಿತಿಷ್ಠ ಪೃತನ್ಯತೊ
ಅವಬಾಧಸ್ವ ಪೃತನಾಯತಃ ॥

ಎಂದರೆ—ಈ ಕಲ್ಲಿನ ಮೇಲೆ ಏರು ಕಲ್ಲಿನಂತೆ ನೀನೂ ಸ್ಥಿರಳಾಗು. ಏನೇ ಕಷ್ಟಕೋಟಲೆ ಬಂದರೂ ಈ ಕಲ್ಲಿನಂತೆ ಕದಲದೆ ನಿಲ್ಲು.

ಇದಾದ ಮೇಲೆಯೇ ಮದುವೆಗೆ ಮುಕ್ತಾಯದ ಮುದ್ರೆಯಾದ ಸಪ್ತಪದಿ. ಇದು ಅದರ ಮಂತ್ರ ಹೆಣ್ಣಿನ ಹೆಜ್ಜೆಯನ್ನು ಹಿಡಿದು ಇಡಿಸಿ, ಗಂಡು ಹೇಳುತ್ತಾನೆ:

ಓಂ ಇಷೆ ಏಕಪದಾ ಭವ ಸಾ ಮಾಮನುವ್ರತಾ ಭವ ।
ಊರ್ಜೆ ದ್ವಿಪದಾ ಭವ ಸಾ ಮಾಮನುವ್ರತಾ ಭವ ।
ರಾಯಸ್ಪೋಷಾಯ ತ್ರಿಪದಾ ಭವ ಸಾ ಮಾಮನುವ್ರತಾ ಭವ ।
ಮಾಯೊಭವಾಯ ಚತುಷ್ಪದಾ ಭವ ಸಾ ಮಾಮನುವ್ರತಾ ಭವ ।
ಪ್ರಜಾಭ್ಯಃ ಪಂಚಪದಾ ಭವ ಸಾ ಮಾಮನುವ್ರತಾ ಭವ ।

**ಋತುಭ್ಯಃ ಷಟ್ಪದಾ ಭವ ಸಾ ಮಾಮನುವ್ರತಾ ಭವ ।**
**ಸಖೆ ಸಪ್ತಪದಾ ಭವ ಸಾ ಮಾಮನುವ್ರತಾ ಭವ ।**

ಎಂದರೆ—ಅನ್ನಕ್ಕಾಗಿ ಮೊದಲನೆಯ ಹೆಜ್ಜೆಯಿಡು, ಇದರಲ್ಲಿ ನನ್ನನ್ನು ಅನುಸರಿಸು. ಬಲದ ಅಭಿವೃದ್ಧಿಗಾಗಿ ಎರಡನೆಯ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು ಧನದ ಅಭಿವೃದ್ಧಿಗಾಗಿ ಮೂರನೆಯ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು. ಮಮತೆಯ ಅಭಿವೃದ್ಧಿಗಾಗಿ ನಾಲ್ಕನೆಯ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು ಸಂತಾನಲಾಭಕ್ಕಾಗಿ ಐದನೆಯ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು. ಅನುಕೂಲವಾದ ಋತುಕಾಲಗಳಿಗಾಗಿ ಆರನೆಯ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು. ನಮ್ಮ ಸ್ನೇಹಕ್ಕಾಗಿ ಏಳನೆಯ ಹೆಜ್ಜೆಯನ್ನು ಇಡು, ಇದರಲ್ಲಿ ನನ್ನನ್ನು ಅನುಸರಿಸು.

ಅದೇ ಮಂತ್ರ ಹೀಗೆ ಮುಂದುವರಿಯುತ್ತದೆ:

**ಸಖಾ ಸಪ್ತಪದಾ ಭವ, ಸಖಾಯೌ ಸಪ್ತಪದಾ ಬಭೂವ, ಸಖ್ಯಂ ತೇ ಗಮೇಯಂ, ಸಖ್ಯಾತ್ತೇ ಮಾ ಯೋಷಂ, ಸಖ್ಯಾನ್ಮೇ ಮಾ ಯೋಷ್ಠಾಃ । ಸಮಯಾವ ಸಂಕಲ್ಪಾವಹೈ ಸಂ ಪ್ರಿಯೌ ರೋಚಿಷ್ಣೂ ಸುಮನಸ್ಯಮಾನೌ । ಇಷಮೂರ್ಜಮಭಿ ಸಂ ವಸಾನೌ ಸಂ ನೌ ಮನಾಂಸಿ ಸಂ ವ್ರತಾ ಸಮು ಚಿತ್ತಾನ್ಯಾಕರಮ್ ॥**

ಎಂದರೆ—ನನ್ನೊಡನೆ ಈ ಏಳು ಹೆಜ್ಜೆಗಳನ್ನು ನಡೆದು, ನೀನು ನನಗೆ ಸಖಿಯಾಗು. ಒಟ್ಟಿಗೆ ಏಳು ಹೆಜ್ಜೆ ನಡೆದು, ನಾವು ಸಖರು ಆಗಿದ್ದೇವೆ. ನಿನ್ನ ಸಖ್ಯವನ್ನು ನಾನು ಉಳಿಸಿಕೊಳ್ಳುವುದಾಗಲಿ, ನಿನ್ನ ಸಖ್ಯವನ್ನು ಕಳೆದುಕೊಳ್ಳದೆ ಇರುವುದಾಗಲಿ, ನನ್ನ ಸಖ್ಯವನ್ನು ನೀನು ಬಿಡುವುದಾಗದಿರಲಿ. ಒಂದಾಗಿ ಇರೋಣ, ಒಂದಾಗಿ ಸಂಕಲ್ಪಿಸೋಣ. ಒಬ್ಬರನ್ನು ಒಬ್ಬರು ಪ್ರೀತಿಸಿ, ಒಬ್ಬರಲ್ಲಿ ಒಬ್ಬರು ರುಚಿ ಪಡೆದು, ಒಬ್ಬರಿಗೆ ಒಬ್ಬರು ಹಿತವನ್ನು ಬಯಸೋಣ. ಸುಖಸಂತೋಷಗಳೆಲ್ಲವನ್ನೂ ಒಟ್ಟಿಗೆ ಅನುಭವಿಸಿ, ನಮ್ಮ ಆಸೆ ಆಕಾಂಕ್ಷೆಗಳನ್ನೂ ನಮ್ಮ ವ್ರತಗಳನ್ನೂ ನಮ್ಮ ಮನಸ್ಸುಗಳನ್ನೂ ಎರಡಿಲ್ಲದೆ ಒಂದುಮಾಡಿ ಬದುಕೋಣ.

ಕಟ್ಟಕಡೆಗೆ, ಇದು ಆಶೀರ್ವಾದ ಮಂತ್ರ:

**ಸಂರಾಜ್ಞೀ ಶ್ವಶುರೇ ಭವ ಸಂರಾಜ್ಞೀ ಶ್ವಶ್ರ್ವಾಂ ಭವ ।**
**ನನಾನ್ದರಿ ಸಂರಾಜ್ಞೀ ಭವ ಸಂರಾಜ್ಞೀ ಅಧಿ ದೇವೃಷು ॥**

ಎಂದರೆ—ಮಾವನಿಗೆ ನೀನು ಸಂರಾಜ್ಞಿಯಾಗು. ಅತ್ತೆಗೆ ನೀನು ಸಂರಾಜ್ಞಿಯಾಗು ನಾದುನಿಯರಿಗೆ ನೀನು ಸಂರಾಜ್ಞಿಯಾಗು. ಮೈದುನರಿಗೆ ನೀನು ಸಂರಾಜ್ಞಿಯಾಗು. (ಎಂದರೆ, ಎಲ್ಲರಿಂದಲೂ ಒಳ್ಳೆಯವಳು ಎನ್ನಿಸಿಕೊ )

ಮತ್ತೆ—

**ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ ।**
**ಸೌಭಾಗ್ಯಮಸ್ಯೈ ದತ್ವಾ ಯಾಥಾಸ್ತು ವಿಪರೇತನ ॥**

ಎಂದರೆ—ಸುಮಂಗಲಿಯಾದ ಈ ವಧುವನ್ನು ಎಲ್ಲರೂ ಕೂಡಿ ನೋಡಿರಿ. ಈಕೆಗೆ ಸೌಭಾಗ್ಯವನ್ನು ಕೋರಿಕೊಟ್ಟು, ಕಳುಹಿಸಿಕೊಡಿರಿ.

ಮದುವೆಯೆಲ್ಲ ಮುಗಿದ ಮೇಲೆ, ಮಗಳನ್ನು ಗಂಡನ ಮನೆಗೆ ಕಳುಹಿಸಿಕೊಡುವಾಗ ಇದು ಮಂತ್ರ:

**ಪೂಷಾ ತ್ವೇತೋ ನಯತು ಹಸ್ತಗೃಹ್ಯಾ-**
**ಶ್ವಿನಾ ತ್ವಾ ಪ್ರವಹತಾಂ ರಥೇನ ।**
**ಗೃಹಾದ್ ಗಚ್ಛ ಗೃಹಪತ್ನೀ ಯಥಾಸೊ**
**ವಶಿನೀ ತ್ವಂ ವಿದಥಮಾವದಾಸಿ ॥**

ಎಂದರೆ—ಪೂಷನ್ (ಸೂರ್ಯ) ನಿನ್ನ ಕೈಯನ್ನು ಹಿಡಿದು ಇಲ್ಲಿಂದ ಕರೆದು ಒಯ್ಯಲಿ, ಅಶ್ವಿನೀ ದೇವತೆಗಳಿಬ್ಬರೂ ರಥದಲ್ಲಿ ನಿನ್ನನ್ನು ಒಯ್ಯಲಿ. ನಿನ್ನ ಗಂಡನ ಮನೆಗೆ ಹೋಗು. ಅಲ್ಲಿ ಗೃಹಪತ್ನಿಯಾಗು. ಅಲ್ಲಿ ವಶವರ್ತಿನಿಯಾಗಿದ್ದು ಅಲ್ಲಿರುವವರೊಡನೆ ತಿಳಿವಳಿಕೆಯಿಂದ ಮಾತನಾಡು.

## ದಾಂಪತ್ಯ ಧರ್ಮ

ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾಃ ।
ಯತ್ರೈತಾಂಸ್ತು ನ ಪೂಜ್ಯಂತೆ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥

ಎಂದರೆ—ಎಲ್ಲಿ ನಾರಿಯರನ್ನು ಮರ್ಯಾದೆಯಿಂದ ಸತ್ಕರಿಸುವರೋ ಅಲ್ಲಿ ದೇವತೆಗಳು ಸಂತೋಷಪಡುವರು. ಎಲ್ಲಿ ಅವರನ್ನು ಮರ್ಯಾದೆಯಿಂದ ಸತ್ಕರಿಸುವುದಿಲ್ಲವೋ ಅಲ್ಲಿ ಮಾಡಿದ ಕರ್ಮಗಳೆಲ್ಲ ನಿಷ್ಫಲ.

ತಸ್ಮಾದೇತಾಃ ಸದಾಪೂಜ್ಯಾ ಭೂಷಣಾಚ್ಛಾದನಾಶನೈಃ ।
ಭೂತಿಕಾಮೈರ್ನರೈರ್ನಿತ್ಯಂ ಸತ್ಕಾರ್ಯೇಷೂತ್ಸವೇಷು ಚ ॥

ಎಂದರೆ—ಆದಕಾರಣದಿಂದ ವೈಭವವನ್ನು ಅಪೇಕ್ಷಿಸುವವರು, ಅವರನ್ನು ಸದಾ ಉಡಿಗೆ ತೊಡಿಗೆ ಅನ್ನಾದಿಗಳಿಂದ ಸತ್ಕರಿಸಬೇಕು. ಸತ್ಕಾರ್ಯ, ಉತ್ಸವ ಈ ಕಾಲಗಳಲ್ಲಿ ಇನ್ನೂ ಅಧಿಕವಾಗಿ ಸತ್ಕರಿಸಬೇಕು

ಸಂತುಷ್ಟೋ ಭಾರ್ಯಯಾ ಭರ್ತಾ ಭರ್ತ್ರಾ ಭಾರ್ಯಾ ತಥೈವ ಚ ।
ಯಸ್ಮಿನ್ಏವ ಕುಲೆ ನಿತ್ಯಂ ಕಲ್ಯಾಣಂ ತತ್ರ ವೈ ಧ್ರುವಮ್ ॥

ಎಂದರೆ—ಯಾವ ಮನೆಯಲ್ಲಿ ಹೆಂಡತಿಯಿಂದ ಗಂಡ, ಗಂಡನಿಂದ ಹೆಂಡತಿ ಸಂತೋಷವನ್ನು ಪಡೆಯುವರೋ ಆ ಮನೆಯಲ್ಲಿ ಮಂಗಳವು ಶಾಶ್ವತವಾಗಿ ಸ್ಥಿರವಾಗಿರುತ್ತದೆ.

ಸ್ತ್ರೀಭಿಃ ಭರ್ತೃವಚಃ ಕಾರ್ಯಂ ಏಷ ಧರ್ಮಃ ಪರಃ ಸ್ತ್ರಿಯಾಃ ।
ಸದ್ವೃತ್ತಚಾರಿಣೀಂ ಪತ್ನೀಂ ತ್ಯಕ್ತ್ವಾ ಪತತಿ ಧರ್ಮತಃ ॥

ಎಂದರೆ—ಹೆಂಗುಸರು ಗಂಡನ ಮಾತನ್ನು ನಡಸತಕ್ಕದ್ದು, ಇದೇ ಅವರಿಗೆ ಪರಮಧರ್ಮ. ಒಳ್ಳೆಯ ನಡತೆಯಿಂದ ನಡೆಯುವ ಪತ್ನಿಯನ್ನು ಬಿಟ್ಟವನು ಧರ್ಮದಿಂದ ಪತಿತನಾಗುತ್ತಾನೆ.

ಅನ್ಯೋನ್ಯಸ್ಯಾ ವ್ಯಭಿಚಾರೋಭವೇದಾಮರಣಾಂತಿಕಃ ।
ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀಪುಂಸಯೋಃ ಪರಃ ॥

ಎಂದರೆ—ಒಟ್ಟಿನಲ್ಲಿ ಹೇಳುವುದಾದರೆ, ಪರಮವಾದ ಧರ್ಮ ಇಷ್ಟೆ: ಗಂಡಹೆಂಡಿರು ಆದವರು ತಾವು ಸಾಯುವವರೆಗೂ ಒಬ್ಬರು ಒಬ್ಬರನ್ನು ಮೀರಿ ನಡೆಯತಕ್ಕದ್ದಲ್ಲ, ಅನ್ಯೋನ್ಯವಾಗಿರಬೇಕು.

# ಟಿಪ್ಪಣಿಗಳು

(ಮೊದಲನೆಯ ಸಂಖ್ಯೆ, ಪುಟ; ಎರಡನೆಯದು ಪದ್ಯ, ಗದ್ಯ.)

೬೫. ೧. ಪಶ್ಚಿಮ ರಂಗಧಾಮ—ಶ್ರೀರಂಗಪಟ್ಟಣದ ರಂಗನಾಥದೇವರು.

೨. 'ರಮಾ ಮಂಗಳದೇವತಾ' ಎಂದು ಮೊದಲಾಗಿ ಲಕ್ಷ್ಮಿಯ ಹೆಸರುಗಳು. 'ವೈಜಯಂತಿ' ಎಂಬುದು ವಿಷ್ಣುವಿನ ವಕ್ಷದಲ್ಲಿನ ಹಾರಕ್ಕೂ ಹೆಸರು; ಆದ್ದರಿಂದ ರಂಗನಾಯಕಿಯನ್ನು ಶ್ರೀಹರಿಯ ಹೃದಯಮಂದಿರದ ವೈಜಯಂತಿ ಎಂದೂ ಎಣಿಸಬಹುದು.

೪. ಮನ್ಮಥನೇ ಮುಂದೆ ಪ್ರದ್ಯುಮ್ನನಾಗಿ ಹುಟ್ಟಿದಾಗ, ರುಕ್ಮಿಣಿ ಅವನ ತಾಯಿ ಆಗುವುದರಿಂದ, ಅವನು ಲಕ್ಷ್ಮಿಯ ಮಗ. ಸಮುದ್ರಮಥನ ಮಾಡಿದಾಗ, ಚಂದ್ರ ಹುಟ್ಟಿದ ಬಳಿಕ ಲಕ್ಷ್ಮಿ ಹುಟ್ಟಿದ್ದರಿಂದ, ಅವಳು ಅವನಿಗೆ ತಂಗಿ.

'ಇಂದಿರಾ ಲೋಕಮಾತಾ ಮಾ ರಮಾ ಮಂಗಳದೇವತಾ
ಭಾರ್ಗವೀ ಲೋಕಜನನೀ ಕ್ಷೀರಸಾಗರಕನ್ಯಕಾ'—ಅಮರ

೬೬. ೧೧. ಇಲ್ಲಿರುವುದು ವಾಮನಾವತಾರದ ಕಥೆಯ ಸೂಚನೆ.

೬೭. ೧೨. ರಾಮಾವತಾರದಲ್ಲಿ ಸೀತೆಗಾಗಿ ದರ್ಭಶಯನದಲ್ಲಿ ಮಲಗಿದ್ದು, ಸಮುದ್ರಕ್ಕೆ ಸೇತುವೆ ಕಟ್ಟಿಸಿದ್ದು, ಇಲ್ಲಿ ಸೂಚಿತವಾಗಿದೆ.

೧೬. ಹರಿಪ್ರಿಯೆ, ಪದ್ಮಾ ಎಂಬುವು ಲಕ್ಷ್ಮಿಗೆ ಪರ್ಯಾಯನಾಮಗಳು.

೬೮. ಗದ್ಯ. ಮಧುಪರ್ಕ—ಜೇನು, ಹಾಲು, ಹಣ್ಣುಗಳ ಮಿಶ್ರಣ. ಅತಿಥಿಗೆ, ಅಥವಾ ಕನ್ಯಾಪಿತೃವಿನ ಮನೆಗೆ ಬರುವ ವರನಿಗೆ ನೀಡುವ ಉಪಾಹಾರ.

೭೦. ೧೦. ಜಡೆಯಲ್ಲಿ ಇರುವವಳು, ಗಂಗೆ.

೭೧. ೧೯. ಐದೆ—ಸುಮಂಗಲಿ. ಮುದಿಯಾದ ಐದೆ—ಮುತ್ತೈದೆ.

೭೨. ೧೭. ಲಾಜಹೋಮ, ಸಪ್ತಪದಿ—ಇವಕ್ಕೆ 'ಮದುವೆಯ ಮಂತ್ರ'ವೆಂಬ ವಿಭಾಗವನ್ನು ನೋಡಿ.

೭೫. ೬. ಜೈನ ಸಂಪ್ರದಾಯದ ರಾಮಾಯಣದಲ್ಲಿ ರಾಮಲಕ್ಷ್ಮಣರನ್ನು 'ಬಲ ಅಚ್ಯುತ' ಎಂದು ಭಾವಿಸುತ್ತಾರೆ. ಆದ್ದರಿಂದ ಇಲ್ಲಿ ಬಲಭದ್ರನೆಂದರೆ ರಾಮ ಎಂದು ಅರ್ಥ.

೭೬. ೮. ಶಚಿ—ಇಂದ್ರನ ಹೆಂಡತಿ. ರೋಹಿಣಿ—ಚಂದ್ರನ ಹೆಂಡತಿ.

೭೭. ೨೧. ಸ್ವಸ್ತಿ—ಸು ಅಸ್ತಿ, ಒಳ್ಳೆಯದು ಆಗಲಿ.

೮೦. ಗದ್ಯ. ಗುಣಾರ್ಣವ ಎಂಬುದು ಇಲ್ಲಿ ಅರ್ಜುನನಿಗೆ ಪರ್ಯಾಯನಾಮ.

೬೨. ೬. ಕೌಸ್ತುಭ—ಈಗ ಕೃಷ್ಣನಾಗಿರುವ ವಿಷ್ಣುವಿನ ವಕ್ಷಃಸ್ಥಲದಲ್ಲಿನ ರತ್ನ.

೬೩. ೧. ಈ ದಂಪತಿಯ ಬಯಕೆ, ಇತ್ಯಾದಿ.—ಈ ವಜ್ರಜಂಘನು ತಾನು ಎರಡು ಜನ್ಮಗಳ ಹಿಂದೆ ಮಹಾಬಳನೆಂಬ ವಿದ್ಯಾಧರನಾಗಿ ಹುಟ್ಟಿದ್ದನು. ಆಯುಸ್ಸು ಮುಗಿದ ಮೇಲೆ, ಈಶಾನಕಲ್ಪವೆಂಬ ಸ್ವರ್ಗದಲ್ಲಿ ಲಲಿತಾಂಗನೆಂಬ ದೇವತೆಯಾದನು. ಆ ಜನ್ಮದಲ್ಲಿ ಲಲಿತಾಂಗನಿಗೆ ಸ್ವಯಂಪ್ರಭೆಯೆಂಬ ದೇವಿ ಮನಃಪ್ರಿಯೆಯಾದಳು. ಅವರಿಬ್ಬರಿಗೂ ಸ್ವರ್ಗದಲ್ಲಿನ ಆಯುಸ್ಸು ಮುಗಿಯಿತು. ಲಲಿತಾಂಗನು ವಜ್ರಜಂಘನೆಂಬ ರಾಜಕುಮಾರನಾಗಿ ಹುಟ್ಟಿದನು. ಸ್ವಯಂಪ್ರಭೆ ಪ್ರಿಯನ ವಿರಹದಿಂದ ಹಂಬಲಿಸಿ, ದೇಹತ್ಯಾಗಮಾಡಿ, ವಜ್ರದಂತನೆಂಬ ಚಕ್ರವರ್ತಿಗೆ ಶ್ರೀಮತಿಯೆಂಬ ಮಗಳಾದಳು. ಇತ್ತ ವಜ್ರಜಂಘನು ತನ್ನ ಸ್ವಯಂಪ್ರಭೆಗಾಗಿ ಹಂಬಲಿಸುತ್ತಿದ್ದನು; ಅತ್ತ ಶ್ರೀಮತಿ ತನ್ನ ಲಲಿತಾಂಗನಿಗಾಗಿ ಹಂಬಲಿಸುತ್ತಿದ್ದಳು. ಈಗ ವಜ್ರಜಂಘನಿಗೂ ಶ್ರೀಮತಿಗೂ ಮದುವೆ ಆದದ್ದರಿಂದ ಹಿಂದಿನ ಜನ್ಮದ ಲಲಿತಾಂಗದೇವನೂ ಸ್ವಯಂಪ್ರಭಾದೇವಿಯೂ ಮತ್ತೆ ದಂಪತಿಗಳಾದಹಾಗಾಯಿತು.

೬೫. ೫. ಈ ಭವದಿಂದ ಆದ ವಾಸನೆ, ಇತ್ಯಾದಿ.—ಈ ವಜ್ರಜಂಘ ಶ್ರೀಮತಿಯರು ಪರಮ ಅನ್ಯೋನ್ಯತೆಯಿಂದ ಸಕಲಭೋಗಗಳನ್ನು ಅನುಭವಿಸುತ್ತಾ, ಒಂದು ರಾತ್ರಿ ಒಟ್ಟಿಗೆ ಮಲಗಿರುವಾಗ, ಮುಚ್ಚಿದ್ದ ಗವಾಕ್ಷದ ಬಾಗಿಲುಗಳನ್ನು ತೆರೆಯಲು ಮರೆತು, ಸೆಜ್ಜೆವಳನು ಧೂಪದ ಗುಂಡಿಗೆಗೆ ಕಾಳಾಗರು ಧೂಪವನ್ನು ಇಕ್ಕಿ ಹೋಗಿದ್ದರೆ; ಆ ಕೃಷ್ಣಾಗರು ಧೂಪದ ಹೊಗೆ ಕೃಷ್ಣಸರ್ಪದ ಹಾಗೆ ಬೆಳೆದು ಹರಡಿ ಹಬ್ಬಿ ಆ ದಂಪತಿಗಳ ಉಸಿರಾಟವನ್ನು ನಿಲ್ಲಿಸಿಬಿಟ್ಟಿತು.

ಬಿಡದೆ ಪೊಗೆ ಸುತ್ತೆ ತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ-
ದೊಡೆಗಳೆದರೋಪರೋಪರೊ-
ಳೊಡೆಸಾಯಲ್ ಪಡೆದರಿನ್ನವೇಂ ಸೈಪೊಳವೇ

ಎಂದು ಈ ಕಥೆಯನ್ನು ನಿರೂಪಿಸುವ ಪಂಪಕವಿ ಹೇಳುತ್ತಾನೆ. ಹೊಗೆ ಬಿಡದೆ ಸುತ್ತಿದರೆ, ತೋಳನ್ನು ಸಡಿಲಿಸದೆ ಆ ಪ್ರಾಣವಲ್ಲಭರು ಅಂದು ತಮ್ಮ ಪ್ರಾಣಗಳನ್ನು ಒಟ್ಟಿಗೆ ನೀಗಿದರು. ಓಪರು (ಪ್ರಿಯರು) ಓಪರ (ಪ್ರಿಯರ) ಸಂಗಡ ಒಟ್ಟಿಗೆ ಸಾಯಲು ಪಡೆದರು. ಇದಕ್ಕಿಂತ ಮೀರಿದ ಪುಣ್ಯ ಬೇರೆ ಯಾವುದು ಉಂಟು ?

ಇಂಥ ಗಾಢವಾದ ಸ್ನೇಹದಿಂದ ಬದುಕಿ ಸತ್ತ ಶ್ರೀಮತಿ ವಜ್ರಜಂಘರು ಮುಂದೆ ತಮ್ಮ ಆರು ಜನ್ಮಗಳು—ಸ್ವರ್ಗದಲ್ಲಿಯಾಗಲಿ, ಭೂಮಿಯಲ್ಲಿ ಆಗಲಿ

—ಒಂದೇ ಎಡೆಯಲ್ಲಿ ಹುಟ್ಟುತ್ತಾರೆ. ಕಟ್ಟಕಡೆಗೆ,ವಜ್ರಜಂಘನು ಮೊದಲನೆಯ ತೀರ್ಥಂಕರನಾಗುವ ಋಷಭನಾಥನಾಗಿ ಜನ್ಮ ತಾಳುತ್ತಾನೆ. ಅದೇ ಜನ್ಮದಲ್ಲಿ ಶ್ರೀಮತಿ, ಆ ತೀರ್ಥಂಕರನಾಗುವವನಿಗೆ ಅವನು ತಪಸ್ಸಿಗೆ ಹೋಗುವ ಮೊದಲು ಆಹಾರದಾನ ಮಾಡುವ ವಿಶೇಷಪುಣ್ಯಕ್ಕೆ ಭಾಗಿಯಾದ ಶ್ರೇಯಾಂಸ ನೆಂಬ ರಾಜನಾಗಿ ಹುಟ್ಟುತ್ತಾಳೆ.

೯೦. ೫. ಚಕ್ರವಾಕ ಎಂಬ ಈ ಹಕ್ಕಿ, ನಮ್ಮ ದೇಶದಲ್ಲಿ ಒಬ್ಬರನ್ನೊಬ್ಬರು ಅಗಲಲಾರದೆ ಇರುವ ಗಾಢವಾದ ಸತಿಪತಿಯರ ಸ್ನೇಹಕ್ಕೆ ಸಂಕೇತ.

೯೧. ೨. ಹಿಮವಂತನ ಮಗಳು ಹೈಮವತೀ, ಗೌರಿ. ಭೃಗುವಿನ ಮಗಳು 'ಭಾರ್ಗವಿ' ಎನಿಸಿದ ಲಕ್ಷ್ಮಿ. ಜನಕನ ಮಗಳು ಜಾನಕಿ, ಸೀತೆ.

೯೩. ೨. ಅರುಂಧತಿ — ಈಕೆ ವಸಿಷ್ಠನ ಹೆಂಡತಿ. ವಸಿಷ್ಠ ಅರುಂಧತಿಯರ ಅನುಕೂಲ ದಾಂಪತ್ಯ ನಮ್ಮ ಪುರಾಣಗಳು ಚಿತ್ರಿಸಿರುವ ಆದರ್ಶದಾಂಪತ್ಯ ಗಳಲ್ಲಿ ಒಂದಾದದ್ದು.

೯೪. ೮. ಅಭವ—ಹುಟ್ಟು, ಬೆಳೆವಣಿಗೆ ಇಲ್ಲದವನು. ನಿರ್ಮಾಯ—ಮಾಯೆ ಇಲ್ಲದವನು.

೯. ಅಜಾತ — ಹುಟ್ಟು ಇಲ್ಲದವನು. ನಿರಾಮಯ — ರೋಗ, ಸಾವು ಇಲ್ಲದವನು.

೯೬. ೧೨. ಜನ್ಮಾಂತರ ಸ್ನೇಹ—ಮೇಲೆ ಪುಟ ೮೩, ೮೫— ಪದ್ಯ ೧, ೫ ಅದರ ಟಿಪ್ಪಣಿ ನೋಡಿ.

೧೪. ಕಾಳಿದಾಸ ತನ್ನ ಶಾಕುಂತಲದಲ್ಲಿ ಹೇಳುತ್ತಾನೆ:

'ಸಮಾನಯಂಸ್ತುಲ್ಯಗುಣಂ ವಧೂವರಂ
ಚಿರಸ್ಯ ವಾಚ್ಯಂ ನ ಗತಃ ಪ್ರಜಾಪತಿಃ'

ಹೆಣ್ಣುಗಂಡನ್ನು ನೋಡಿ ಮಾಡಿ ಗಂಟುಹಾಕುವುದಿಲ್ಲ, ಎಂದು ಬ್ರಹ್ಮನಿಗೆ ಬಹುಕಾಲದಿಂದ ಕಟ್ಟಿಬಂದಿರುವ ಕೆಟ್ಟ ಹೆಸರು ಈ ಅನುಕೂಲವಾದ ದಾಂಪತ್ಯ ದಿಂದ ಕಳೆದುಹೋಗಲಿ.

೯೮. ಗದ್ಯ. ವನಮಾಲಾ—ಕೃಷ್ಣನ ಕೊರಳಿನ ವನಕುಸುಮಮಾಲೆಯ ಹೆಸರು.

೧೦೫. ೬. ಈ ಪದ್ಯದ ಉತ್ತರಾರ್ಧ ಸ್ಪಷ್ಟವಾಗಿಲ್ಲ.

೧೦೮. ೧೯. ಹಾವ—ಶೃಂಗಾರಚೇಷ್ಟೆ. ಭಾವ—ಅಭಿಪ್ರಾಯ.

೨೦. ಕಾರಿರುಳು—ಕಪ್ಪಾದ ರಾತ್ರೆ.

೨೩. ವಸ್ತುಕ—ಗದ್ಯ, ಕಂದ, ವೃತ್ತಗಳಿಂದ ಕೂಡಿದ 'ಚಂಪೂ.' ವರ್ಣಕ ಎಂಬುದು ಷಟ್ಪದಿ, ಸಾಂಗತ್ಯ ಮುಂತಾದ ಅಚ್ಚಕನ್ನಡ ಛಂದಸ್ಸಿನ ಕಾವ್ಯ.

೧೧೬. ೭. ಗಳಿಗೆಯನ್ನು ಗೊತ್ತುಮಾಡುವುದಕ್ಕಾಗಿ ನೀರನ್ನೋ ಮರಳನ್ನೋ ತುಂಬಿದ ಬಟ್ಟಲು 'ಗಳಿಗೆವಟ್ಟಲು.' ಅದರಿಂದ ನೀರೋ ಮರಳೋ ಸುರಿಯುವುದನ್ನು ನಿಯಮಿಸುವ ರಂಧ್ರಕ್ಕೆ ಬೆಣೆಯಾಗಿ ಹಾಕುವ ಕಡ್ಡಿಯೋ 'ಶಂಕುಶಲಾಕೆ.'

೧೨೨. ಈ ಸಂದರ್ಭದಲ್ಲಿ, ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕದಲ್ಲಿ ಕಣ್ವರು ದುಷ್ಯಂತನಿಗೆ ಹೇಳಿಕಳುಹುವ, ಶಕುಂತಲೆಗೆ ಹೇಳುವ ಮಾತುಗಳನ್ನು ಸ್ಮರಿಸಿಕೊಳ್ಳಬಹುದು.

> ಅಸ್ಮಾನ್ ಸಾಧು ವಿಚಿನ್ತ್ಯ ಸಂಯಮಧನಾನುಚ್ಚೈಃಕುಲಂ ಚಾತ್ಮನ-
> ಸ್ತ್ವಯ್ಯಸ್ಯಾಃ ಕಥಮಪ್ಯಬಾನ್ಧವಕೃತಾಂ ಸ್ನೇಹಪ್ರವೃತ್ತಿಂ ಚ ತಾವ್ |
> ಸಾಮಾನ್ಯಪ್ರತಿಪತ್ತಿಪೂರ್ವಕಮಿಯಂ ದಾರೇಷು ದೃಶ್ಯಾ ತ್ವಯಾ
> ಭಾಗ್ಯಾಯತ್ತಮತಃಪರಂ ನ ಖಲು ತದ್ವಾಚ್ಯಂ ವಧೂಬನ್ಧುಭಿಃ ||

(ನಾವು ಸಂಯಮಧನರೆಂಬುದನ್ನೂ ನೀನು ಉಚ್ಚವಾದ ಕುಲದವನೆಂಬುದನ್ನೂ ಈಕೆಗೆ ನೀನಾಗಿಯೇ ಒಲಿದುದನ್ನೂ ಬಾಂಧವರ ಕೈವಾಡವಿಲ್ಲದೆ ಈಕೆ ತಾನಾಗಿಯೇ ನಿನ್ನಲ್ಲಿ ಸ್ನೇಹ ಬೆಳೆಸಿದ್ದನ್ನೂ ಚೆನ್ನಾಗಿ ಚಿಂತಿಸಿ, ಈಕೆಯನ್ನು ಗೌರವಿಸಿ, ನಿನ್ನ ಪತ್ನಿಯರಲ್ಲಿ ಒಬ್ಬಳೆಂದು ಭಾವಿಸತಕ್ಕದ್ದು. ಇದಕ್ಕೆ ಮೀರಿದ್ದು ಅವರವರ ಭಾಗ್ಯ; ಅದನ್ನು ವಧುವಿನ ಬಂಧುಗಳು ಹೇಳತಕ್ಕದ್ದಲ್ಲ.)

> ಶುಶ್ರೂಷಸ್ವ ಗುರೂನ್ ಕುರು ಪ್ರಿಯಸಖೀವೃತ್ತಿಂ ಸಪತ್ನೀಜನೇ
> ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾ ಸ್ಮ ಪ್ರತೀಪಂ ಗಮಃ |
> ಭೂಯಿಷ್ಠಂ ಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
> ಯಾನ್ತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ ||

(ಹಿರಿಯರ ಶುಶ್ರೂಷೆಮಾಡು. ಸವತಿಯರೊಡನೆ ಪ್ರಿಯಸಖಿಯಾಗಿ ನಡೆದುಕೊ. ಪತಿ ಒಂದು ವೇಳೆ ಜುಗುಪ್ಸೆಗೊಂಡರೂ ಕೋಪದಿಂದ ಅವನಿ ಪ್ರತಿಕೂಲೆಯಾಗಬೇಡ. ಪರಿಜನರಲ್ಲಿ ದಾಕ್ಷಿಣ್ಯದಿಂದ ವರ್ತಿಸು. ಭಾಗ್ಯ ಬಂದ ಕಾಲದಲ್ಲಿ ಸೆಡೆತುಕೊಂಡಿರಬೇಡ. ಹೀಗೆ ನಡೆಯುವ ಯುವತಿಯ ಗೃಹಿಣಿಯರಾಗುವರು; ಇದಕ್ಕೆ ವಿರುದ್ಧವಾಗಿ ನಡೆದವರು ಕುಲಕ್ಕೆ ದುಃ ವನ್ನು ತರುವರು.)

THE B. B. D. POWER PRESS, COTTONPET, BANGALORE CITY